KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಜನವರಿ ೨೧, ೨೦೧೦ (ಮಾಘ ೧, ಶಕ ವರ್ಷ ೧೯೩೧) | ಸಂಚಿಕೆ ೩ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯ ನೌಕರರ ನಿವೃತ್ತಿ ವಯಸ್ಸನ್ನು 58 ರಿಂದ 60 ವರ್ಷಗಳಿಗೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 44 ಸೇವಿಸಿ 2008, ದಿನಾಂಕ: 28–7–2008.

2. ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 44 ಸೇವಿಸಿ 2008, ದಿನಾಂಕ: 13–8–2008.

3. ಪತ್ರ ಸಂಖ್ಯೆ: ವಾಕೈ 44 ರೇಉನಿ 2008, ದಿನಾಂಕ: 13–11–2008.

4. ಪತ್ರ ಸಂಖ್ಯೆ: ಕೆಎಸ್ಎಂಬಿ/ಆಡಳಿತ/ಎ1/ಪಿಇಆರ್–ಇಎಸ್‌ಟಿ–6/2008–09/1273, ದಿನಾಂಕ: 20.12.2008.

5. ಪತ್ರ ಸಂಖ್ಯೆ: ವಾಕೈ 44 ರೇಉನಿ 2008, ದಿನಾಂಕ: 31–1–2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಆದೇಶದಲ್ಲಿ ಸರ್ಕಾರಿ ನೌಕರರ ನಿವೃತ್ತಿ ವಯಸ್ಸನ್ನು 58 ವರ್ಷಗಳಿಂದ 60 ವರ್ಷಗಳಿಗೆ ಹೆಚ್ಚಿಸಿರುತ್ತದೆ. ಈ ಸೌಲಭ್ಯವನ್ನು ಸಾರ್ವಜನಿಕ ವಲಯದ ಉದ್ಯಮಗಳ ಕಂಪೆನಿ/ಮಂಡಳಿ/ನಿಗಮದ ನೌಕರರಿಗೆ ವಿಸ್ತರಿಸಲು ಕ್ರಮ ಕೈಗೊಳ್ಳುವಂತೆ ಮೇಲೆ ಓದಲಾದ ಕ್ರಮಸಂಖ್ಯೆ (2) ರ ಅ.ಟಿ.ಯಲ್ಲಿ ನಿರ್ದೇಶಿಸಲಾಗಿರುತ್ತದೆ. ಅದರಂತೆ, ನಿವೃತ್ತಿ ವಯಸ್ಸನ್ನು 58 ರಿಂದ 60 ಕ್ಕೆ ಹೆಚ್ಚಿಸಲು ಕ್ರಮತೆಗೆದುಕೊಳ್ಳುವಂತೆ ಕ್ರಮಸಂಖ್ಯೆ (3)ರ ಪತ್ರದಲ್ಲಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಗೆ ಸೂಚಿಸಲಾಗಿತ್ತು. ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯ ಹದಗೆಟ್ಟ ಆರ್ಥಿಕ ಪರಿಸ್ಥಿತಿ ಹಾಗೂ ಅದು ಪ್ರಾರಂಭಿಸಿರುವ ಆರ್ಥಿಕ ಮಿತವ್ಯಯದ ಹಿನ್ನೆಲೆಯಲ್ಲಿ ಮಂಡಳಿಯು ತನ್ನ ನೌಕರರ ವಯಸ್ಸನ್ನು 58 ವರ್ಷಗಳಿಗೆ ಉಳಿಸಿಕೊಳ್ಳಲು ತೀರ್ಮಾನಿಸಿ ಈ ಬಗ್ಗೆ ಸರ್ಕಾರದ ಅನುಮೋದನೆ ನೀಡುವಂತೆ ಮೇಲೆ ಓದಲಾದ ಕ್ರಮಸಂಖ್ಯೆ (4)ರ ಪತ್ರದಲ್ಲಿ ಸರ್ಕಾರವು ಕೋರಿದ್ದ ಹಿನ್ನೆಲೆಯಲ್ಲಿ ಕಂಪೆನಿಯು ಸತತವಾಗಿ ನಷ್ಟದಲ್ಲಿರುವುದರಿಂದ ಮತ್ತು ಸದರಿ ಕಂಪೆನಿಯನ್ನು ಮುಚ್ಚುವ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿದ್ದ ಹಿನ್ನೆಲೆಯಲ್ಲಿ ನಿವೃತ್ತಿ ವಯಸ್ಸನ್ನು 58 ವರ್ಷಗಳಿಗೆ ಉಳಿಸಿಕೊಳ್ಳಲು ಸರ್ಕಾರದ ಅನುಮೋದನೆಯನ್ನು ಮೇಲೆ ಓದಲಾದ ಕ್ರಮಸಂಖ್ಯೆ (5) ರ ಪತ್ರದಲ್ಲಿ ನೀಡಲಾಯಿತು.

ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ನೌಕರರ ನಿವೃತ್ತಿ ವಯಸ್ಸನ್ನು 58 ವರ್ಷಗಳಿಗೆ ಉಳಿಸಿಕೊಂಡ ಕ್ರಮವನ್ನು ಪ್ರಶ್ನಿಸಿ ನಿವೃತ್ತಿ ಹೊಂದಿದ ಮಂಡಳಿಯ ನೌಕರರು ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಲ್ಲಿಸಿದರು. ಈ ಪ್ರಕರಣಗಳಲ್ಲಿ ನ್ಯಾಯಾಲಯವು ತೀರ್ಪು ನೀಡಿ 58 ವರ್ಷಗಳಿಗೆ ನಿವೃತ್ತಿ ವಯಸ್ಸನ್ನು ಉಳಿಸಿಕೊಳ್ಳುವ ಮಂಡಳಿಯ ತೀರ್ಮಾನಕ್ಕೆ ಸರ್ಕಾರವು ಅನುಮೋದನೆ ನೀಡಿರುವುದು, ಕರ್ನಾಟಕ ನಾಗರೀಕ ಸೇವಾ (ವ್ಯವಹಾರ ನಿರ್ವಹಣೆ) ನಿಯಮಗಳು 1977ರ ಪ್ರಕಾರ ಇರುವುದಿಲ್ಲವಾದ್ದರಿಂದ ಅದು ಸಿಂಧುವಲ್ಲವೆಂದು ತಿಳಿಸಿ, ಸದರಿ ಆದೇಶವನ್ನು ರದ್ದುಗೊಳಿಸಿತು. ಈ ಹಿನ್ನೆಲೆಯಲ್ಲಿ ವಿಷಯವನ್ನು ಕರ್ನಾಟಕ ನಾಗರೀಕ ಸೇವಾ (ವ್ಯವಹಾರ ನಿರ್ವಹಣೆ) ನಿಯಮಗಳು 1977ರ ಪ್ರಕಾರ ಮರು ಪರಿಶೀಲಿಸಲಾಯಿತು ಮತ್ತು ಸರ್ಕಾರದ ನೀತಿಯಲ್ಲಿ ಏಕರೂಪತೆ ಕಾಪಾಡುವ ದೃಷ್ಟಿಯಿಂದ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯ ನೌಕರರ ನಿವೃತ್ತಿ ವಯಸ್ಸನ್ನು ಸಹ 60 ವರ್ಷಗಳಿಗೆ ಹೆಚ್ಚಿಸಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 49 ರೇಉನಿ 2009, ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2009**

ಸರ್ಕಾರದ ನೀತಿಯಲ್ಲಿ ಏಕರೂಪತೆ ಕಾಪಾಡುವ ಹಿತದೃಷ್ಟಿಯಿಂದ ಸರ್ಕಾರದ ಸ್ವಾಧೀನದ ಎಲ್ಲಾ ಸಾರ್ವಜನಿಕ ಉದ್ಯಮಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ನೌಕರರ ನಿವೃತ್ತಿ ವಯಸ್ಸನ್ನು 60 ವರ್ಷಕ್ಕೆ ನಿಗದಿಪಡಿಸಲು ತೀರ್ಮಾನಿಸಲಾಗಿರುವುದರಿಂದ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯ ನೌಕರರ ನಿವೃತ್ತಿ ವಯಸ್ಸನ್ನೂ ಸಹ 58 ರಿಂದ 60 ವರ್ಷಗಳಿಗೆ ಭವಿಷ್ಯವರ್ತಿಯಾಗಿ ಹೆಚ್ಚಿಸಲು ತೀರ್ಮಾನಿಸಲಾಗಿದೆ. ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ಅದರಂತೆ ಅಗತ್ಯ ಕ್ರಮ ಕೈಗೊಳ್ಳಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2862 **ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ) ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ವಿಷಯ:** ಮೆ. ಹಟ್ಟಿ ಚಿನ್ನದ ಗಣಿ ಕಂಪನಿ ನಿಯಮಿತ, ರಾಯಚೂರು ಜಿಲ್ಲೆಯ ಲಿಂಗಸಗೂರು ತಾಲ್ಲೂಕಿನ ಹಟ್ಟಿ ಚಿನ್ನದ ಗಣಿಯಲ್ಲಿ ಹೊಸ ಶಾಫ್ಟ್ ಅಭಿವೃದ್ಧಿ ಪಡಿಸುವ ಕುರಿತು.

**ಓದಲಾಗಿದೆ:** HGML ನ ವ್ಯವಸ್ಥಾಪಕ ನಿರ್ದೇಶಕರ ದಿ: 22–08–2009ರ ಅ.ಸ.ಪತ್ರ ಸಂಖ್ಯೆ: 9/RO/HGML/2009.

**ಪ್ರಸ್ತಾವನೆ:**

ಮೇಲೆ ಓದಲಾದ ದಿ:22–08–09ರ ಪತ್ರದಲ್ಲಿ, ಹಟ್ಟಿ ಚಿನ್ನದ ಗಣಿ ಕಂಪನಿಯ ವ್ಯವಸ್ಥಾಪಕ ನಿರ್ದೇಶಕರು ರಾಯಚೂರು ಜಿಲ್ಲೆಯ ಲಿಂಗಸಗೂರು ತಾಲ್ಲೂಕಿನ ಹಟ್ಟಿಯಲ್ಲಿ ಸಂಸ್ಥೆಯು ಹೊಂದಿರುವ ಚಿನ್ನದ ಗಣಿಯಲ್ಲಿ ಹೊಸ ಶಾಫ್ಟ್ ಅಭಿವೃದ್ಧಿ ಪಡಿಸುವ ಕುರಿತು ಪ್ರಸ್ತಾವನೆಯನ್ನು ಸಲ್ಲಿಸಿದ್ದು, ಅದರ ಪ್ರಮುಖ ಅಂಶಗಳು ಈ ಕೆಳಗಿನಂತಿವೆ.

1) ಹಟ್ಟಿ ಚಿನ್ನದ ಗಣಿ ಕಂಪನಿಯ ಮುಖ್ಯ ಭೂಗತ ಘಟಕವು ಹಟ್ಟಿಯಲ್ಲಿದ್ದು, ಹಾಲಿ ಮೂರು ಶಾಫ್ಟ್‌ಗಳು 1) ಮಲ್ಲಪ್ಪ ಶಾಫ್ಟ್ 2) ಸೆಂಟ್ರಲ್ ಶಾಫ್ಟ್ 3) ವಿಲ್ಲೇಜ್ ಶಾಫ್ಟ್‌ಗಳು ನಾಲ್ಕು ಚಿನ್ನದ ಅದಿರು ಇರುವ ಮಧ್ಯದ ಬಂಡೆ ಸಾಲು ಓಕ್ಲೇಸ್ ಬಂಡೆಸಾಲು, ಒಂದನೆ ವಲಯದ ಬಂಡೆ ಸಾಲು ಮತ್ತು ಸ್ಟ್ರೈಕ್ ರೀಫ್‌ಗಳಲ್ಲಿ ಅದಿರು ತೆಗೆಯುವುದು/ಉತ್ಪಾದನಾ ಚಟುವಟಿಕೆಯಲ್ಲಿ ತೊಡಗಿರುತ್ತವೆ. ಹಟ್ಟಿಯ ಭೂಮಿಯೊಳಗಿನ ಗಣಿಯು ಹಾಲಿ 20 ಮಟ್ಟಗಳವರೆಗೆ (2000 ಅಡಿಗಳ ವರೆಗೆ) ಕಾರ್ಯನಿರ್ವಹಿಸುತ್ತಿದ್ದು, ಈ ಮೂರು ಶಾಫ್ಟ್‌ಗಳು ಗಣಿಯಲ್ಲಿ 20ನೇ ಮಟ್ಟದವರೆಗೆ ಚಿನ್ನದ ನಿಕ್ಷೇಪಗಳನ್ನು ಲಾಭದಾಯಕವಾಗಿ ಬಳಸಿಕೊಳ್ಳುವಲ್ಲಿ ತುಂಬಾ ಉಪಯುಕ್ತವಾಗಿವೆ. ಆದರೆ ಇವುಗಳ ಸಾಮರ್ಥ್ಯವು 21ನೇ ಮಟ್ಟದ ಆಳದಿಂದ ಕಾರ್ಯನಿರ್ವಹಿಸಲು ಅಂದರೆ ಕೆಲಸಗಾರರನ್ನು/ಸಾಮಗ್ರಿಗಳನ್ನು ಕೆಳಗಿಳಿಸಲು ಮತ್ತು ಅದಿರನ್ನು ಮೇಲೆತ್ತಲು ತುಂಬಾ ಸಮರ್ಥವಾಗಿಲ್ಲ. ಇಪ್ಪತ್ತನೇ ಮಟ್ಟದವರೆಗಿನ ಚಿನ್ನದ ನಿಕ್ಷೇಪವು ಖಾಲಿಯಾಗುತ್ತಿದ್ದು/ಕಡಿಮೆಯಾಗುತ್ತಿರುವುದರಿಂದ, ಕಂಪನಿಯು ಈಗಾಗಲೇ 21 ರಿಂದ 24ನೇ ಮಟ್ಟದವರೆಗೆ ಅಭಿವೃದ್ಧಿ ಕಾರ್ಯವನ್ನು ಕೈಗೊಂಡಿದ್ದು, ಭವಿಷ್ಯದಲ್ಲಿ ಬೇಗನೇ 30ನೇ ಮಟ್ಟದಲ್ಲಿ (3000 ಅಡಿ ಆಳದಲ್ಲಿ) ಕಾರ್ಯನಿರ್ವಹಿಸುವುದು. ಆದ್ದರಿಂದ ಚಿನ್ನದ ಗಣಿಯ ಕಾರ್ಯಗಳನ್ನು ಜೀವಂತವಾಗಿರಿಸಿಕೊಂಡು ಹೋಗಲು ಪ್ರಸ್ತಾಪಿಸಿದ 6 ಮೀ (20 ಅಡಿ) ವ್ಯಾಸದ ಹೊಸ ಶಾಫ್ಟ್‌ನ್ನು 1100 ಮೀ (3300 ಅಡಿಗಳು) ಆಳಕ್ಕೆ ಕೊರೆಯುವುದು ಅತ್ಯಾವಶ್ಯಕವಾಗಿ ಆಗಬೇಕಾಗಿದೆ ಎಂದು ವ್ಯವಸ್ಥಾಪಕರು, ನಿರ್ದೇಶಕರು, ಹಟ್ಟಿ ಚಿನ್ನದ ಗಣಿ ಕಂಪನಿ, ಇವರು ತಮ್ಮ ದಿ: 22–08–09ರ ಪತ್ರದಲ್ಲಿ ತಿಳಿಸಿರುತ್ತಾರೆ.

**2) ಪ್ರಸ್ತಾಪಿಸಲಾದ ಹೊಸ ಶಾಫ್ಟ್‌ನ ಪ್ರಯೋಜನಗಳು :**

ಎ) ಅದಿರು ಉತ್ಪಾದನೆಯಲ್ಲಿ ಹೆಚ್ಚಳ ಮತ್ತು ವರ್ಷಕ್ಕೆ 7 ಲಕ್ಷ ಟನ್‌ಗಳಷ್ಟನ್ನು ಮೇಲೆತ್ತುವುದು.

ಬಿ) ಒಂದು ಸಲಕ್ಕೆ 100 ಮಂದಿ ಕೆಲಸಗಾರರನ್ನು ಇಳಿಸಿ ಮೇಲೆತ್ತುವ ಸಾಮರ್ಥ್ಯವನ್ನು ಹೊಂದುವುದು.

ಸಿ) ಗಣಿಯೊಳಗೆ ಆಳಕ್ಕೆ ಶುದ್ಧ ಗಾಳಿಯನ್ನು ಒತ್ತಡದಿಂದ ನುಗ್ಗಿಸಿ, ವಾತಾಯನ ವ್ಯವಸ್ಥೆಯನ್ನು ಸುಧಾರಿಸಿ ಕಡ್ಡಾಯವಾದ ಗಣಿ ಸುರಕ್ಷತಾ ಗುಣಮಟ್ಟವನ್ನು ಅಳವಡಿಸಿಕೊಳ್ಳುವುದು.

ಡಿ) ದೊಡ್ಡ ಪ್ರಮಾಣದ ಗಣಿಕಾರಿಕಾ ಉಪಕರಣಗಳನ್ನು ಬಿಚ್ಚದೇ ಭೂ ಒಳಗಿನ ಗಣಿಗೆ ಕೆಳಗಿಳಿಸಲು ಸಾಮರ್ಥ್ಯಗೊಳಿಸುವುದು.

ಇ) ಹೊಸ ಶಾಫ್ಟ್ ಗಣಿಯ ಮುಖ್ಯ ಹೊರದಾರಿಯಾಗಿ ಕಾರ್ಯನಿರ್ವಹಿಸುವುದು ಮಲ್ಲಪ್ಪ ಶಾಫ್ಟ್ ಎರಡನೇ ಹೊರದಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದು, ಇದು ಗಣಿ ಸುರಕ್ಷತೆಯ ಶಾಸನಬದ್ಧ ಅಗತ್ಯವನ್ನು ಪೂರೈಸುತ್ತದೆ.

ಎಫ್) ದಿನಕ್ಕೆ 2000 ಟನ್ ಸಾಮರ್ಥ್ಯದ, 68.22 ಕೋಟಿ ವೆಚ್ಚದ ಸ್ಯಾಗ್ ಮತ್ತು ಬಾಲ್‌ಮಿಲ್ ಚಿನ್ನದ ಅದಿರನ್ನು ಪುಡಿಗಟ್ಟುವ ಕಾರ್ಯವನ್ನು 2009ರ ನವೆಂಬರ್‌ನಲ್ಲಿ ಪ್ರಾರಂಭಿಸಲು ಯೋಜಿಸಲಾಗಿದೆ. ಈ ಹೊಸ ಮಿಲ್‌ಗೆ ಅದಿರನ್ನು ಪೂರೈಸಲು ಪ್ರಸ್ತಾಪಿಸಲಾದ ಹೊಸ ಶಾಫ್ಟ್‌ನ್ನು ಕಾರ್ಯಾರಂಭ ಮಾಡುವುದರ ಮೂಲಕ ಅದಿರನ್ನು ಮೇಲೆತ್ತುವ ಸಾಮರ್ಥ್ಯವನ್ನು ಹೆಚ್ಚಿಸುವುದು ಅಗತ್ಯವಾಗಿರುತ್ತದೆ.

3) ಪ್ರಸ್ತಾಪಿಸಲಾದ ಹೊಸ ಶಾಫ್ಟ್‌ಗೆ 2008ರಲ್ಲಿ ರೂ. 130.50 ಕೋಟಿಗಳಾಗಬಹುದೆಂದು ಅಂದಾಜು ಮಾಡಲಾಗಿತ್ತು ಹಟ್ಟಿ ಚಿನ್ನದ ಗಣಿ ಕಂಪನಿ ನಿರ್ದೇಶಕರ ಮಂಡಳಿಯು ದಿನಾಂಕ: 14–6–2008ರಂದು ನಡೆದ ತನ್ನ 344ನೇ ಸಭೆಯಲ್ಲಿ ಈ ಪ್ರಸ್ತಾವನೆಯನ್ನು 4 ವರ್ಷಗಳ ಅವಧಿಯಲ್ಲಿ ಕಾರ್ಯಗತಗೊಳಿಸಲು ಒಪ್ಪಿಗೆ ನೀಡಿತ್ತು. ಹಟ್ಟಿ ಚಿನ್ನದ ಗಣಿ ಕಂಪನಿಯು ಈಗ ಅಂದಾಜು ಪಟ್ಟಿಯನ್ನು ಪುನರ್‌ವಿಮರ್ಶಿಸಿದ್ದು, ಯೋಜನೆಯನ್ನು 204.89ಕೋಟಿ ವೆಚ್ಚದಲ್ಲಿ (ವಾರ್ಷಿಕ ಸುಮಾರು ಶೇ. 10ರ ಏರಿಕೆಯಾಗಬಹುದೆಂಬ ನಿರೀಕ್ಷೆಯಲ್ಲಿ) 2010–11ರಿಂದ ಪ್ರಾರಂಭಿಸಿ 2013–14ರಲ್ಲಿ ಪೂರೈಸುವ ಗುರಿ ಹೊಂದಿದೆ.

4) ನಾಲ್ಕು ವರ್ಷಗಳ ಅವಧಿಯಲ್ಲಿ ಹೂಡಿಕೆ ಮಾಡುವ 204.89 ಕೋಟಿ ರೂ.ಗಳಿಂದ ವಾರ್ಷಿಕ 598.75 ಕೆ.ಜಿ ಚಿನ್ನವನ್ನು ಹೆಚ್ಚಿಗೆ ಉತ್ಪಾದಿಸಲಾಗುವುದೆಂದು ಅಂದಾಜಿಸಲಾಗಿದೆ. ಸಾಧಾರಣವಾದ ಮಾರಾಟ ಬೆಲೆಯನ್ನು ಗ್ರಾಂಗೆ 1300/– ರೂ. ಗಳನ್ನಿಟ್ಟುಕೊಂಡರೂ, ವಾರ್ಷಿಕ 77.83 ಕೋಟಿ. ರೂ.ಗಳ ಅಧಿಕ ಆದಾಯ ಬರುವ ನಿರೀಕ್ಷೆಯಿದ್ದು, ಏರಿಕೆಯಾದ ಉತ್ಪಾದನಾ ವೆಚ್ಚವನ್ನು ಕಳೆದು ಮತ್ತು ತೆರಿಗೆಗಳಿಗೆ ತೆಗೆದಿಟ್ಟ ಬಳಿಕ, ವಾರ್ಷಿಕ ತೆರಿಗೆ (ನಂತರ) ಬಳಿಕೆ ಉಳಿಕೆ (ಹೆಚ್ಚಿಗೆಯಾದ) ಹಣವು 26.62 ಕೋಟಿಗಳಾಗಿದ್ದು, ಮರುಪಾವತಿ ಅವಧಿಯು 7.70 ವರ್ಷಗಳಾಗಿರುತ್ತದೆ ಎಂದು ವ್ಯವಸ್ಥಾಪಕ ನಿರ್ದೇಶಕರು ತಿಳಿಸಿರುತ್ತಾರೆ.

5) ಹಟ್ಟಿ ಚಿನ್ನದ ಗಣಿ ಕಂಪನಿಯ ಯೋಜನೆಯನ್ನು ಕಾರ್ಯಗತಗೊಳಿಸಲು ಪ್ರಾರಂಭಿಕ ಕ್ರಮಗಳನ್ನು ತೆಗೆದುಕೊಂಡು ವ್ಯಾಪಾರ ನಿಯಮಗಳ ಕರಾರುಗಳಂತೆ ಸರ್ಕಾರದ ಸಾಂಪ್ರದಾಯಿಕ ಅನುಮೋದನೆಯನ್ನು ಕೋರಿರುತ್ತದೆ. ಹಟ್ಟಿ ಚಿನ್ನದ ಗಣಿ ಕಂಪನಿಯು ಈ ಹೊಸ ಶಾಫ್ಟ್ ಯೋಜನೆಯನ್ನು ತನ್ನ ಆಂತರಿಕ ಸಂಪನ್ಮೂಲಗಳಿಂದಲೇ ಕಾರ್ಯಗತಗೊಳಿಸುವ ಸಾಮರ್ಥ್ಯ ಹೊಂದಿದ್ದು, ಅದಕ್ಕಾಗಿ ಕರ್ನಾಟಕ ಸರ್ಕಾರದಿಂದಾಗಲೀ ಅಥವಾ ಇನ್ನಿತರ ಹಣಕಾಸು ಸಂಸ್ಥೆಗಳಿಂದಾಗಲೀ ಹಣಕಾಸಿನ ನೆರವು ಬೇಕಿರುವುದಿಲ್ಲ.

ಮೇಲಿನ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 42 ಸಿಎಂಸಿ 2008, ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2009**

ಪ್ರಸ್ತಾವನೆಯಲ್ಲಿನ ಅಂಶಗಳ ಹಿನ್ನೆಲೆಯಲ್ಲಿ ರಾಯಚೂರು ಜಿಲ್ಲೆಯ ಲಿಂಗಸಗೂರು ತಾಲ್ಲೂಕಿನ ಹಟ್ಟಿಯಲ್ಲಿ ಹಟ್ಟಿ ಚಿನ್ನದ ಗಣಿ ಕಂಪನಿಯು ಹೊಂದಿರುವ ಚಿನ್ನದ ಗಣಿಯಲ್ಲಿ ಹೊಸ ಶಾಫ್ಟ್ ಅನ್ನು ಅಭಿವೃದ್ಧಿ ಪಡಿಸುವ ಕುರಿತ ಪ್ರಸ್ತಾವನೆಗೆ ಕೆಳಕಂಡ ಷರತ್ತುಗಳಿಗೊಳಪಡಿಸಿ, ಸರ್ಕಾರವು ತಾತ್ವಿಕವಾಗಿ ಒಪ್ಪಿಗೆ ನೀಡಿದೆ.

1. ರಾಯಚೂರು ಜಿಲ್ಲೆ, ಲಿಂಗಸಗೂರು ತಾಲ್ಲೂಕಿನ ಹಟ್ಟಿಯಲ್ಲಿ ಹಟ್ಟಿ ಚಿನ್ನದ ಗಣಿ ಕಂಪನಿಯು 204.84 ಕೋಟಿ ರೂ.ಗಳ ಮನರ್ ವಿಮರ್ಶಿಸಿದ ಅಂದಾಜಿನಂತೆ ಹೊಸ ಶಾಫ್ಟ್‌ನ್ನು 4 ವರ್ಷಗಳ ಅವಧಿಯಲ್ಲಿ ಕೊರೆಯಲು ತಾತ್ವಿಕವಾಗಿ ಒಪ್ಪಿಗೆ ನೀಡಲಾಗಿದೆ. ಈ ಒಪ್ಪಿಗೆಯು ಗುತ್ತಿಗೆ ನೀಡುವ ಪೂರ್ವದಲ್ಲಿ ಸರ್ಕಾರದ ಅನುಮೋದನೆಯನ್ನು ಪಡೆದುಕೊಳ್ಳಬೇಕೆಂಬ ಷರತ್ತಿಗೆ ಒಳಪಟ್ಟಿರುತ್ತದೆ.
2. ಈ ಯೋಜನೆಯ ಸಂಪೂರ್ಣ ವೆಚ್ಚವನ್ನು ಹಟ್ಟಿ ಚಿನ್ನದ ಗಣಿಗಳ ಕಂಪನಿಯು ತನ್ನ ಆಂತರಿಕ ಸಂಪನ್ಮೂಲಗಳಿಂದಲೇ ಭರಿಸತಕ್ಕದ್ದು.
3. ಈ ಯೋಜನೆಯನ್ನು ಅನುಷ್ಠಾನಗೊಳಿಸುವಲ್ಲಿ The Karnataka transparency in Public procurement Act ನಲ್ಲಿನ ನಿಯಮ/ನಿಬಂಧನೆಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ದಿ: 26–03–2009ರ ಅನಧಿಕೃತ ಟಿಪ್ಪಣಿ ಸಂಖ್ಯೆ: FD 1569 Exp-1/09 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2863

**ಎ.ಪಿ. ರಾಮಕೃಷ್ಣ**

ಪೀಠಾಧಿಕಾರಿ (ಗಣಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಇಂಧನ ಸಚಿವಾಲಯ

**ವಿಷಯ:** ಶ್ರೀ ಆರ್.ಬಿ. ಶಿವರಾಜು, ಲೆಕ್ಕಾಧಿಕಾರಿ, ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ, ಬೆಂಗಳೂರು ಇವರ ಅಮಾನತ್ತನ್ನು ರದ್ದುಗೊಳಿಸಿ ಪುನರ್ ಸ್ಥಾಪಿಸುವ ಕುರಿತು.

**ಓದಲಾಗಿದೆ:** 1. ಮುಖ್ಯ ವಿದ್ಯುತ್ ಪರಿವೀಕ್ಷಕರ ಪತ್ರ ಸಂಖ್ಯೆ: ಮುವಿಪ/ಸಿಸ1/ಲ.ನಿ.ಕಾ/22540/08–09 ದಿನಾಂಕ:26.09.2008.

2. ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)ಸಿ/ಕ್ರೈಂ.57/2008 ಬೆಂಗಳೂರು ದಿನಾಂಕ: 01–10–2008.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 103 ಇಬಿಎಸ್ 2008 ದಿನಾಂಕ: 17–11–2008.
4. ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಅರ್ಜಿ ಸಂಖ್ಯೆ: 557/2009 ದಿನಾಂಕ: 06–02–2009.
5. ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಅರ್ಜಿ ಸಂಖ್ಯೆ: 557/2009 ದಿನಾಂಕ: 27–07–2009.
6. ಮುಖ್ಯ ವಿದ್ಯುತ್ ಪರಿವೀಕ್ಷಕರ ಪತ್ರ ಸಂಖ್ಯೆ: ಮುವಿಪ/ಸಿಸ1/18058/09–10 ದಿನಾಂಕ:03–09–2009.

**ಪ್ರಸ್ತಾವನೆ:**

ಶ್ರೀ ಆರ್.ಬಿ. ಶಿವರಾಜು, ಲೆಕ್ಕಾಧಿಕಾರಿ, ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ, ಮೈಶುಗರ್ ಕಟ್ಟಡ, ನೆಲ ಮಹಡಿ, ಜೆ.ಸಿ.ರಸ್ತೆ, ಬೆಂಗಳೂರು–2, ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದಲ್ಲಿ ಇವರ ಮೇಲೆ ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13 (1)(ಡಿ) ರ ಜೊತೆಗೆ 13 (2)ರ ಪ್ರಕಾರ ಪೊಲೀಸ್ ಇನ್ಸ್‌ಪೆಕ್ಟರ್, ಪೊಲೀಸ್ ವಿಂಗ್, ಬೆಂಗಳೂರು ನಗರ ವಿಭಾಗ, ಲೋಕಾಯುಕ್ತ ಠಾಣೆ, ಮೊಹರು ಸಂಖ್ಯೆ: 57/2008ರಲ್ಲಿ ಪ್ರಕರಣವನ್ನು ದಾಖಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (1)ರಲ್ಲಿ ಪತ್ರದಲ್ಲಿ ಮುಖ್ಯ ವಿದ್ಯುತ್ ಪರಿವೀಕ್ಷಕರು, ಶ್ರೀ ಆರ್.ಬಿ. ಶಿವರಾಜು, ಲೆಕ್ಕಾಧಿಕಾರಿ, ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ, ಮೈಶುಗರ್ ಕಟ್ಟಡ, ನೆಲ ಮಹಡಿ, ಜೆ.ಸಿ.ರಸ್ತೆ, ಬೆಂಗಳೂರು–2, ಇಲ್ಲಿ

ಕರ್ತವ್ಯ ನಿರ್ವಹಿಸುತ್ತಿರುವ ಇವರನ್ನು ದಿನಾಂಕ: 25–09–2008 ರಂದು ಮಧ್ಯಾಹ್ನ 3–30 ಗಂಟೆಗೆ ಲಂಚ ನಿರೋಧ ಕಾಯ್ದೆಯಡಿ ಟ್ರ್ಯಾಪ್ ಮಾಡಿ ಕರ್ನಾಟಕ ಲೋಕಾಯುಕ್ತ ಪೊಲೀಸರು ದಸ್ತಗಿರಿ ಮಾಡಿರುವುದಾಗಿ ದಿನಾಂಕ: 25–09–2008 ರಂದು ಪೊಲೀಸ್ ಇನ್ಸ್‌ಪೆಕ್ಟರ್ ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ ಬೆಂಗಳೂರು ರವರು ಪ್ರಕರಣಕ್ಕೆ ಸಂಬಂಧಿಸಿದಂತೆ ತಿಳುವಳಿಕೆ ಪತ್ರ ನೀಡಿರುವುದಾಗಿ ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (2)ರಲ್ಲಿ ಪತ್ರದಲ್ಲಿ ಹೆಚ್ಚುವರಿ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ರವರು ತಮ್ಮ ವರದಿಯಲ್ಲಿ ಆರೋಪಿತ ಶ್ರೀ ಆರ್.ಬಿ. ಶಿವರಾಜು, ಲೆಕ್ಕಾಧಿಕಾರಿ, ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ ಮೈಶುಗರ್ ಕಟ್ಟಡ, ನೆಲ ಮಹಡಿ, ಜೆ.ಸಿ.ರಸ್ತೆ, ಬೆಂಗಳೂರು–2, ಇವರು ಕರ್ತವ್ಯ ನಿರ್ವಹಿಸುತ್ತಿದ್ದ ಸ್ಥಳದಲ್ಲಿಯೇ ಮುಂದುವರೆದಲ್ಲಿ, ಸುಗಮ ತನಿಖೆಗೆ ಅಡ್ಡಿ ಉಂಟು ಮಾಡುವ/ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ಸಾಕ್ಷಿ–ಪುರಾವೆಗಳನ್ನು ನಾಶಪಡಿಸುವ ಸಾಧ್ಯತೆಗಳಿರುವುದರಿಂದ, ಸದರಿ ಅಧಿಕಾರಿಯರವನ್ನು ಕೂಡಲೇ ಅಮಾನತ್ತಿನಲ್ಲಿಟ್ಟು ಅವರ ಲೀನ್ (ಸ್ಥಳವನ್ನು) ಅನ್ನು ಬೇರೆ ಕಡೆಗೆ ವರ್ಗಾಯಿಸುವಂತೆ ಕೋರಿರುತ್ತಾರೆ. ಹಾಗೂ ಸದರಿ ಅಧಿಕಾರಿಯವರನ್ನು ದಿನಾಂಕ:25–09–2008ರಿಂದಲೇ ಅಮಾನತ್ತಿನಲ್ಲಿಟ್ಟಿರುವುದಾಗಿ ಪರಿಗಣಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (3)ರಲ್ಲಿ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ರವರ ಪತ್ರದನ್ವಯ ಸರ್ಕಾರಿ ಆದೇಶ ಸಂಖ್ಯೆ: ಇಎನ್ 103 ಇಬಿಎಸ್ 2008 ದಿನಾಂಕ: 17–11–2008ರಲ್ಲಿ ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 10 (1) (ಎ) ಮೇರೆಗೆ ತನಿಖೆಯನ್ನು ಬಾಕಿ ಇಟ್ಟು ಶ್ರೀ ಆರ್.ಬಿ. ಶಿವರಾಜು, ಇವರನ್ನು ದಿನಾಂಕ: 25–09–2008ರಿಂದ ಜಾರಿಗೆ ಬರುವಂತೆ ಅಮಾನತ್ತಿನಲ್ಲಿಡಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (4)ರಲ್ಲಿ ಶ್ರೀ ಆರ್.ಬಿ. ಶಿವರಾಜು, ಲೆಕ್ಕಾಧಿಕಾರಿ ಇವರು ಸರ್ಕಾರಿ ಆದೇಶ ಸಂಖ್ಯೆ: ಇಎನ್ 103 ಇಬಿಎಸ್ 2008 ದಿನಾಂಕ: 17–11–2008ರ ಅಮಾನತ್ತಿನ ಆದೇಶವನ್ನು ಪ್ರಶ್ನಿಸಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಲ್ಲಿಸಿದ್ದರು.

ಮೇಲೆ ಓದಲಾದ ಕ್ರಮಾಂಕ (5)ರ ಆದೇಶದಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಿಂದ ತೀರ್ಪು ದಿನಾಂಕ:27–07–2009ರಂದು ಅಂತಿಮವಾಗಿ ಹೊರಬಿದ್ದಿದ್ದು, ಸರ್ಕಾರದಿಂದ ಹೊರಡಿಸಲಾದ ಆದೇಶ ಸಂಖ್ಯೆ: ಇಎನ್ 103 ಇಬಿಎಸ್ 2008 ದಿನಾಂಕ: 17–11–2008 ನ್ನು ರದ್ದುಗೊಳಿಸಿ ಈ ಕೆಳಕಂಡಂತೆ ಆದೇಶಿಸಿದೆ.

“For the above said reasons, the application is allowed and the order of suspension No. EN 103 EBS 2008 dated : 17-11-2008 (Annexure `A4’) issued by the Government is hereby quashed, keeping liberty to the Government, if it so desires, to examine the matter afresh and to pass a fresh order in the light of the observations made above”.

ಮೇಲೆ ಓದಲಾದ ಕ್ರಮಾಂಕ (6)ರ ಪತ್ರದಲ್ಲಿ ಮುಖ್ಯ ವಿದ್ಯುತ್ ಪರಿವೀಕ್ಷಕರು ಶ್ರೀ ಆರ್.ಬಿ. ಶಿವರಾಜು, ಲೆಕ್ಕಾಧಿಕಾರಿ ರವರು ಸಲ್ಲಿಸಿದ ಮನವಿ ಮತ್ತು ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಅರ್ಜಿ ಸಂಖ್ಯೆ: 557/2009ರ ದಿನಾಂಕ:27.7.2009ರ ಆದೇಶದ ಪ್ರತಿಯನ್ನು ಸಲ್ಲಿಸಿ ಶ್ರೀ ಆರ್.ಬಿ. ಶಿವರಾಜು ಇವರಿಗೆ ಲೆಕ್ಕಾಧಿಕಾರಿ ಹುದ್ದೆಗೆ ಪುನರ್ ಸ್ಥಾಪಿಸಿ ಸರ್ಕಾರದ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಅರ್ಜಿ ಸಂಖ್ಯೆ: 557/2009ರ ದಿನಾಂಕ: 27–7–2009ರ ತೀರ್ಪಿನ ಮೇಲೆ ಮೇಲ್ಮನವಿ ಸಲ್ಲಿಸದಿರಲು ಆಡಳಿತ ಇಲಾಖೆ ನಿರ್ಣಯಿಸಿದೆ.

ಅರ್ಜಿ ಸಂಖ್ಯೆ: 557/2009ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ದಿನಾಂಕ: 27–7–2009 ರಂದು ನೀಡಿದ ತೀರ್ಪಿನ ಹಿನ್ನೆಲೆಯಲ್ಲಿ ಶ್ರೀ ಆರ್.ಬಿ. ಶಿವರಾಜು ಲೆಕ್ಕಾಧಿಕಾರಿ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ, ಮೈಶುಗರ್ ಕಟ್ಟಡ, ನೆಲ ಮಹಡಿ, ಜೆ.ಸಿ.ರಸ್ತೆ, ಬೆಂಗಳೂರು–2, ರವರ ಅಮಾನತ್ತನ್ನು ತೆರವುಗೊಳಿಸಿ, ಪುನರ್‌ಸ್ಥಾಪಿಸಲು ಕೂಲಂಕಷವಾಗಿ ಪರೀಶಿಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 35 ಇಬಿಎಸ್ 2009, ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಆರ್.ಬಿ. ಶಿವರಾಜು, ಲೆಕ್ಕಾಧಿಕಾರಿ, ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ ಮೈಶುಗರ್ ಕಟ್ಟಡ, ನೆಲ ಮಹಡಿ, ಜೆ.ಸಿ.ರಸ್ತೆ, ಬೆಂಗಳೂರು–2, ಇವರನ್ನು ಅಮಾನತ್ತುಗೊಳಿಸಿರುವ ಸರ್ಕಾರಿ ಆದೇಶ ಸಂಖ್ಯೆ ಇಎನ್ 103 ಇಬಿಎಸ್ 2008 ದಿನಾಂಕ: 17–11–2008 ನ್ನು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಅರ್ಜಿ ಸಂಖ್ಯೆ: 557/2009ರಲ್ಲಿ ದಿನಾಂಕ: 27–7–2009 ರಂದು ನೀಡಿದ್ದ ತೀರ್ಪಿನಲ್ಲಿ ರದ್ದುಗೊಳಿಸಿರುವ ಕಾರಣದಿಂದಾಗಿ ಇವರ ವಿರುದ್ಧ ಹೂಡಲಾಗಿರುವ ಟ್ರ್ಯಾಪ್ ಪ್ರಕರಣದ ಸಂಖ್ಯೆ: 57/2008ರಲ್ಲಿ ಸಕ್ಷಮ ನ್ಯಾಯಾಲಯದ ಅಂತಿಮ ತೀರ್ಮಾನವನ್ನು ಬಾಕಿ ಇಟ್ಟು, ತಕ್ಷಣದಿಂದ ಜಾರಿಗೆ ಬರುವಂತೆ ಶ್ರೀ ಆರ್.ಬಿ. ಶಿವರಾಜು, ಲೆಕ್ಕಾಧಿಕಾರಿ, ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ ಮೈಶುಗರ್ ಕಟ್ಟಡ, ನೆಲ ಮಹಡಿ, ಜೆ.ಸಿ.ರಸ್ತೆ, ಬೆಂಗಳೂರು–2, ಇವರನ್ನು ಈ ಹಿಂದೆ ಕರ್ತವ್ಯ ನಿರ್ವಹಿಸುತ್ತಿದ್ದ ಲೆಕ್ಕಾಧಿಕಾರಿ ಹುದ್ದೆಗೆ ಪುನರ್ ಸ್ಥಾಪಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2847

**ಸುಜಾತಮ್ಮ**

ಪೀಠಾಧಿಕಾರಿ, ಇಂಧನ ಇಲಾಖೆ.

**ವಿಷಯ:** ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಲ್ಲಿ ಕಲ್ಲಿದ್ದಲನ್ನು ಖರೀದಿಸುವಲ್ಲಿ ಹಾಗೂ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದಲ್ಲಿ ಪವರ್ ಟ್ರಾನ್ಸ್‌ಫಾರ್ಮರ್ ಖರೀದಿಸುವಲ್ಲಿ ನಡೆದಿರುವ ಅಕ್ರಮಗಳ ಬಗ್ಗೆ ವಿಚಾರಣೆ ನಡೆಸುವ ಕುರಿತು.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 125 ಪಿಪಿಸಿ 2009 ದಿನಾಂಕ: 13–10–2009

2. Central Pension Accounting Office, ಭಾರತ ಸರ್ಕಾರ ಇವರ ಪತ್ರ ದಿನಾಂಕ: 18–07–2009.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶ (1)ರಲ್ಲಿ ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರಾದ ಜಸ್ಟೀಸ್ ಶ್ರೀ ವಿ.ಪಿ. ಮೋಹನ್ ಕುಮಾರ್‌ರವರನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಲ್ಲಿ ಕಲ್ಲಿದ್ದಲನ್ನು ಖರೀದಿಸುವಲ್ಲಿ ಹಾಗೂ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದಲ್ಲಿ ಪವರ್ ಟ್ರಾನ್ಸ್‌ಫಾರ್ಮರ್ ಖರೀದಿಸುವಲ್ಲಿ ನಡೆದಿರುವ ಅಕ್ರಮಗಳ ಬಗ್ಗೆ ವಿಚಾರಣೆಯನ್ನು ನಡೆಸಲು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ ಹಾಗೂ ಸದರಿ ಆದೇಶದಲ್ಲಿ ವಿಚಾರಣೆ ನಡೆಸುವ ನಿವೃತ್ತ ನ್ಯಾಯಾಧೀಶರ ನಿಬಂಧನೆ ಮತ್ತು ಷರತ್ತುಗಳನ್ನು ಪ್ರತ್ಯೇಕ ಆದೇಶದಲ್ಲಿ ಹೊರಡಿಸಲಾಗುವುದೆಂದು ತಿಳಿಸಲಾಗಿದೆ.

ಮೇಲೆ ಓದಲಾದ ಪತ್ರ (2)ರಲ್ಲಿ ಜಸ್ಟೀಸ್ ಶ್ರೀ ವಿ.ಪಿ. ಮೋಹನ್ ಕುಮಾರ್‌ರವರಿಗೆ ರೂ. 90,000/– (Fixed) ವೇತನ ಹಾಗೂ ಮಾಸಿಕ ನಿವೃತ್ತಿ ವೇತನ ರೂ. 22,900/– (01–01–2006 ರಿಂದ Basic Pension) ನಿಗದಿಪಡಿಸಿರುವುದನ್ನು ಗಣನೆಗೆ ತೆಗೆದುಕೊಂಡು ಅವರಿಗೆ ಮಾಸಿಕ ವೇತನ, ಮನೆ ಭತ್ಯೆ ಹಾಗೂ ಆತಿಥ್ಯ ಭತ್ಯೆಯನ್ನು (Sumptuary Allowance) ನಿಗದಿಪಡಿಸುವ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 125 ಪಿಪಿಸಿ 2009, ಬೆಂಗಳೂರು, ದಿನಾಂಕ: 14ನೇ ಡಿಸೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಜಸ್ಟೀಸ್ ಶ್ರೀ ವಿ.ಪಿ. ಮೋಹನ್ ಕುಮಾರ್‌ರವರಿಗೆ ಅವರು ಈಗಾಗಲೇ ಪಡೆಯುತ್ತಿರುವ ಮಾಸಿಕ ರೂ.22,900/– ನಿವೃತ್ತಿ ವೇತನವನ್ನು ಕಳೆದು ರೂ. 67,100/– ಮಾಸಿಕ ವೇತನ, ಮನೆಭತ್ಯೆ, ಆತಿಥ್ಯ ಭತ್ಯೆಯನ್ನು ನೀಡಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 1766 ವೆಚ್ಚ 1/09 ದಿನಾಂಕ:08.12.2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2848 **ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಅಪಜೀ 25 ಇಎನ್‌ಜಿ 2008, ಬೆಂಗಳೂರು, ದಿನಾಂಕ: 25ನೇ ನವೆಂಬರ್ 2009**

**ಉಲ್ಲೇಖ:** ಸರ್ಕಾರಿ ಆದೇಶ ಸಂಖ್ಯೆ. ಅಪಜೀ 25 ಇಎನ್‌ಜಿ 2008 ದಿನಾಂಕ: 4.2.2009

ಉಲ್ಲೇಖಿತ ಆದೇಶದ ಪ್ರಸ್ತಾವನೆಯ 3ನೇ ಕಂಡಿಕೆಯ 6ನೇ ಪಂಕ್ತಿಯಲ್ಲಿನ ಅಧಿಸೂಚನೆಯ ಸಂಖ್ಯೆ ಎಫ್‌ಇಇ 273 ಎಫ್‌ಜಿಎಲ್ 2002ರ ಬದಲಿಗೆ ಎಫ್‌ಇಇ 247 ಎಫ್‌ಜಿಎಲ್ 2002 ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಮನೋಹರ್**

ಪಿ.ಆರ್. 2766 ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

## ಕಂದಾಯ ಸಚಿವಾಲಯ

**ತಿದ್ದುಪಡಿ ಆದೇಶ ಸಂಖ್ಯೆ: ಕಂಇ 230 ಎಲ್‌ಆರ್‌ಎ 2009, ಬೆಂಗಳೂರು, ದಿನಾಂಕ: 26ನೇ ನವೆಂಬರ್ 2009**

ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂಇ 25 ಎಲ್‌ಆರ್‌ಎ 2008 ದಿನಾಂಕ 20.10.2009 ರ ಪಟ್ಟಿಯ ಕ್ರ.ಸಂ. 2 ರಲ್ಲಿ "ರಾಯಚೂರು ಗ್ರಾಮೀಣ" ಎಂಬುದರ ಬದಲಾಗಿ "ರಾಯಚೂರು" ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ನಾರಾಯಣಗೌಡ**

ಪಿ.ಆರ್. 2769 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ ಸುಧಾರಣೆ)

## ಒಳಾಡಳಿತ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಒಇ 292 ಪಿಪಿಇ 2009, ಬೆಂಗಳೂರು, ದಿನಾಂಕ: 4ನೇ ಡಿಸೆಂಬರ್ 2009**

ಸರ್ಕಾರದ ಆದೇಶ ಸಂಖ್ಯೆ: ಒಇ 292 ಪಿಪಿಇ 2009, ದಿನಾಂಕ: 12.10.2009ರ ಆದೇಶದ ಉಲ್ಲೇಖ (2)ರಲ್ಲಿ ತನಿಖಾಧಿಕಾರಿಯ ವರದಿ ದಿನಾಂಕ: "29.8.2009" ರ ಬದಲಾಗಿ ದಿನಾಂಕ: "27.7.2009" ಎಂದು, ಆದೇಶ ಓದಲಾಗಿದೆ ಅಂಕಣದ 1ನೇ ಕಂಡಿಕೆಯ 10ನೇ ಸಾಲಿನಲ್ಲಿ ಲಂಚ ನಿರೋಧಕ ಕಾಯ್ದೆ "19(ಸಿ)" ಬದಲಿಗೆ ಲಂಚ ನಿರೋಧಕ ಕಾಯ್ದೆ "19(1)(ಬಿ)" ಎಂದು ಮತ್ತು ಆದೇಶದ 4ನೇ ಪುಟದ ಕೊನೆ ಕಂಡಿಕೆ 2ನೇ ಸಾಲಿನಲ್ಲಿ ಕಲಂ "19(ಸಿ)" ಬದಲಿಗೆ ಕಲಂ "19(1)(ಬಿ)" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳುವುದು. ಉಳಿದಂತೆ ದಿನಾಂಕ: 12.10.2009ರ ಸರ್ಕಾರದ ಆದೇಶದಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಪಿ.ಆರ್. 2780 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

## ಇಂಧನ ಸಚಿವಾಲಯ

**ವಿಷಯ:** ಮೆ:: ಪಿಜಿಸಿ ಹೈಡ್ರೋ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** 1 ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/06/ಅಂಬಿಂದಗುಂಡಿ ಎಂಹೆಚ್ಎಸ್/09/1021 ದಿನಾಂಕ:25/26.2.2009.

2 ದಿನಾಂಕ: 23.10.2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ಪಿಜಿಸಿ ಹೈಡ್ರೋ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ಮಂಜಲ್ತಾರ್ ಗ್ರಾಮದ ಅಂಬಿಂದಗುಂಡಿ ಹೊಳೆಗೆ ಅಡ್ಡಲಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ:: ಪಿಜಿಸಿ ಹೈಡ್ರೋ ಪವರ್ ಪ್ರಾಜೆಕ್ಟ್ಸ್ ಲಿಮಿಟೆಡ್ ಇವರಿಗೆ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುವುದರಿಂದ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 181 ಎನ್‌ಸಿಇ 2009, ಬೆಂಗಳೂರು, ದಿನಾಂಕ: 4ನೇ ಡಿಸೆಂಬರ್ 2009**

ಮೆ:: ಪಿಜಿಸಿ ಹೈಡ್ರೋ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ಮಂಜಲ್ತಾರ್ ಗ್ರಾಮದ ಅಂಬಿಂದಗುಂಡಿ ಹೊಳೆಗೆ ಅಡ್ಡಲಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (**Weir Latitude**: 13°12'08" **Longitude**: 75°05'42'' EL 90 M and Power House Latitude : 13°12'38'' Longitude : 75°05'26'') ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

1(ಅ) ಸದರಿ ಯೋಜನೆಯಿಂದ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು

ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ / ನೀರಾವರಿ / ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10 ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

12 ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2794

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಕಾರ್ಮಿಕ ಸಚಿವಾಲಯ

**ವಿಷಯ:** 2008–09ನೇ ಸಾಲಿನಲ್ಲಿ ಕೇಂದ್ರ ಸರ್ಕಾರದ ಯೋಜನೆಯಾದ "ಸಾರ್ವಜನಿಕ ಮತ್ತು ಖಾಸಗಿ ಸಹಭಾಗಿತ್ವದಲ್ಲಿ 1396 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಉನ್ನತೀಕರಣ" ಅಡಿಯಲ್ಲಿ ಡಿಜಿಇಟಿ ಯಿಂದ ಅನುಮೋದನೆಯಾಗಿರುವ 26 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: LD 121 ETI 2007 Dt. 04/03/2008

2) ಉದ್ಯೋಗ ಮತ್ತು ತರಬೇತಿ ಇಲಾಖೆರವರ ಪತ್ರ ಸಂ. ಉತನಿ/ತರಬೇತಿ/ಸಿಒಇ–ಪಿಪಿಪಿ/ವಿವ–55/2007–08 ದಿನಾಂಕ: 27/05/2009 ಮತ್ತು 10/08/2009.

**ಪ್ರಸ್ತಾವನೆ:**

ಮೇಲೆ(1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2007–08ನೇ ಸಾಲಿನಲ್ಲಿ ಉನ್ನತೀಕರಿಸಲಾದ 26 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಉನ್ನತೀಕರಿಸಲು ಹಾಗೂ ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ ಇವರು ಕೇಂದ್ರ ಸರ್ಕಾರವು ಕಳುಹಿಸಿರುವ ಮೆಮೊರಾಂಡಮ್ ಆಫ್ ಅಸೋಸಿಯೇಷನ್‌ಗೆ ಸಹಿ ಮಾಡಲು ಅನುಮೋದನೆ ನೀಡಲಾಗಿದೆ. ಅಲ್ಲದೆ ಈ ಸಂಸ್ಥೆಗಳಿಗೆ ಐಎಂಸಿಯನ್ನು ರಚಿಸಲು ಹಾಗೂ ಅವುಗಳಿಗೆ ಆರ್ಥಿಕ ಹಾಗೂ ಆಡಳಿತಾತ್ಮಕ ಅಧಿಕಾರಗಳನ್ನು ಪ್ರತ್ಯಾಯೋಜಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ(2)ರಲ್ಲಿ ಓದಲಾದ ಉದ್ಯೋಗ ಮತ್ತು ತರಬೇತಿ ಇಲಾಖೆರವರ ಪತ್ರಗಳಲ್ಲಿ 2008–09ನೇ ಸಾಲಿನಲ್ಲಿ ಡಿಜಿಇಟಿ ರವರು 26 ಸಂಸ್ಥೆಗಳನ್ನು ಉನ್ನತೀಕರಿಸಲು ಅನುಮೋದನೆಯನ್ನು ನೀಡಿರುತ್ತಾರೆ ಎಂದೂ, ಅಲ್ಲದೆ ಪ್ರತಿ ಸಂಸ್ಥೆಗೆ ರೂ. 2.50 ಕೋಟಿಯಂತೆ ಬಡ್ಡಿರಹಿತ ಸಾಲವನ್ನು ಐಎಂಸಿ ಹೆಸರಿನಲ್ಲಿ ತೆರೆಯಲಾಗಿರುವ ಬ್ಯಾಂಕ್ ಖಾತೆಗೆ ಜಮಾ ಆಗಿರುತ್ತದೆ ಎಂದೂ, ಸದರಿ 26 ಸಂಸ್ಥೆಗಳನ್ನು ದಿನಾಂಕ 30/07/2008 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಸ್ಟೇಟ್ ಸ್ಟೀರಿಂಗ್ ಕಮಿಟಿ ಸಭೆಯಲ್ಲಿ ಎಲ್ಲಾ 26 ಸಂಸ್ಥೆಗಳ ಹಾಗೂ ಎಂ.ಒ.ಯು/ಐ.ಡಿ.ಪಿ. ಗಳ ಅನುಮೋದನೆ ಯನ್ನು ಪಡೆಯಲಾಗಿದೆ ಎಂದೂ, ಆದಕಾರಣ 2008–09 ನೇ ಸಾಲಿನಲ್ಲಿ ಉನ್ನತೀಕರಿಸಲಾಗಿರುವ 26 ಸಂಸ್ಥೆಗಳಿಗೆ ಸೂಕ್ತ ಸರ್ಕಾರದ ಆದೇಶವನ್ನು ಹೊರಡಿಸುವಂತೆ ಕೋರಿರುವರು.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ಕಾಇ 268 ಇಟಿಐ 2009, ಬೆಂಗಳೂರು, ದಿನಾಂಕ: 16ನೇ ಸೆಪ್ಟೆಂಬರ್ 2009**

2008–09ನೇ ಸಾಲಿನಲ್ಲಿ ಕೇಂದ್ರ ಸರ್ಕಾರದ ಯೋಜನೆಯಾದ "ಸಾರ್ವಜನಿಕ ಮತ್ತು ಖಾಸಗಿ ಸಹಭಾಗಿತ್ವದಲ್ಲಿ 1396 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಉನ್ನತೀಕರಣ" ಅಡಿಯಲ್ಲಿ ಡಿಜಿಇಟಿ ಯಿಂದ ಅನುಮೋದನೆಯಾಗಿರುವ 26 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಉನ್ನತೀಕರಿಸಲು ಮಂಜೂರಾತಿ ನೀಡಲಾಗಿದೆ. 26 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಹೆಸರನ್ನು ಅನುಬಂಧ–1 ರಲ್ಲಿ ಲಗತ್ತಿಸಲಾಗಿದೆ.

ಈ 26 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ಐಎಂಸಿಯನ್ನು ರಚಿಸಲು ಹಾಗೂ ಇವನ್ನು ಸೊಸೈಟಿ ಕಾಯ್ದೆ ಅಡಿ ನೋಂದಾಯಿಸಲು ಮಂಜೂರಾತಿ ನೀಡಲಾಗಿದೆ. ಈ ಐಎಂಸಿಗಳಿಗೆ ಆಡಳಿತಾತ್ಮಕ ಮತ್ತು ಆರ್ಥಿಕ ಅಧಿಕಾರವನ್ನು ಸರ್ಕಾರಿ ಆದೇಶ ಸಂಖ್ಯೆ: ಕಾಇ 121 ಇಟಿಐ 2007 ದಿನಾಂಕ 04/03/2008 ರಲ್ಲಿ ನೀಡಿರುವಂತೆಯೇ ಪ್ರತ್ಯಾಯೋಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಎ.ಎಸ್. ವಿಶ್ವೇಶ್ವರಯ್ಯ**

ಪೀಠಾಧಿಕಾರಿ, ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

**ANNEXURE-I**

**UPGRADATION OF 1396 GOVT. ITIs THROUGH PUBLIC PRIVATE PARTNERSHIP TAKEN UP DURING 2008-09**

| Sl. No. | Name of the Govt. ITI | Name of the Principal (Division wise) | Name of the Industry Association | Name of the Industry Partner | Name of Chairman and Contact No. |
|---|---|---|---|---|---|
| | | | **BANGALORE DIVISION** | | |
| 1 | Bharmasagara | Mahabaleshwar B.S. | BCIC | M/s Silicon Micro Systems | Mr. Jayachandra Aradhya M.S Ph:080-22425830/31 Mob:98440-40444 |
| 2 | Challakere | H.M. Zarifulla | CII | M/s Career Launcher | Mr. A.S. Holla Ph:41505590, 32925287 Mob:9886163784 |
| 3 | Channagiri | Muralidhar T. Lamani | CII | M/s Career Launcher | Mr. A.S. Holla Ph:41505590, 32925287 Mob:9886163784 |
| 4 | Pavgada | Sreenivasa R. | BCIC | M/s Kennametal India Limited | Mr. D. Sarathy, Ph:080-22198270 Mob:9845193750 |
| 5 | Ramanagara | Meenakshi G.S. | CII | M/s Affordable Business Solutions | Mr. Srikant Rao, Ph: 91 80 41152760 Mob: 91 9845029010 |
| | | | **MYSORE DIVISION** | | |
| 6 | Arsikere | Ashwath Narayan | BCIC | M/s. KTwo Technologies Solutions Pvt. Ltd. | Mr. Arvind Padmanabhan, Ph:080-23144422 Mob:9845679324 |
| 7 | Arakalgud | B.S. Giridhara Murthy | BCIC | M/s Hamshine Electronics | Mr.Hamsraj, Managing Director, Ph:08172-240233 Mob:9448140219 |
| 8 | Belthangadi | Anantha Padmaraj | CII | M/s Affordable Business Solutions | Mr. Srikant Rao, Ph: 91 80 41152760 Mob:91 9845029010 |
| 9 | K.M. Doddi | Lakshmirajaiah T.R. | CII | M/s BEML, Mysore | Mr. A.R.Krishna Reddy |
| 10 | Kadur | Shekarappa | CII | M/s Metro Cash & Carry | Mr.John Idicula Ph:22192021/22192000 |
| 11 | Ponnampet (W) | Nagaraju P.K. | CII | M/s Karnataka Hybrid Micro Devices Ltd., | Mr. E.S. Dwaraka Das Ph:28528594 Mob:9980019623 |
| 12 | Kollegala | Gurumurthy | CII | M/s Career Launcher | A.S. Holla Ph:41505590, 32925287 Mob:9886163784 |
| 13 | Vitla | Balakrishna A. | BCIC | M/s Shree Venkateshwara Processors | Sri P. Subraya Pai Ph: 08255-239278 Mob: 9448454244 |
| 14 | Mysore-08 | Gurumurthy | CII | M/s Velankani Information Systems Private Ltd. | Sri Kiron D.Shah Ph:080-66145894 |
| | | | **BELGAUM DIVISION** | | |
| 15 | Akki Alur | Savadatti Mutt | BCIC | M/s Forbes Campbell Knitwear | Mr. A.B.N.Patel Ph:0831-2418584 |
| 16 | Beelagi | Rajput U.K. | CII | Career Launcher | Mr. Jayaram Krishnan Ph:41505590, 32925287 Mob:9740069637 |
| 17 | Kalaghatagi | Nagarathna V.Kotur | BCIC | M/s KTwo Technologies Solutions Pvt. Ltd., | Mr. Kiran Patil, Ph:080-23144422 Mob:9972304497 |
| 18 | Nesargi | Revathi B.V. | CII | Career Launcher | Mr. Jayaram Krishnan Ph:41505590, 32925287 Mob:9740069637 |
| 19 | Nippani | Khilare S.S. | CII | Career Launcher | Mr. Jayaram Krishnan Ph:41505590, 32925287 Mob:9740069637 |
| 20 | Sadalaga | Chethana Hiremath | CII | M/s Ever Onn Systems India Ltd., | Vinod M.M. Ph:9444397381 |
| 21 | Savadatti | Madhav P. Kushtagi | CII | M/s Ever Onn Systems India Ltd., | Vinod. M.M. Ph:9444397381 |
| 22 | Gokak | Khilare S.S. | BCIC | M/s Gokak Mills | Mr. Raveesh Ph:08332 225004 Mob: 9448084999 |
| 23 | Mundargi | Shivasharana | BCIC | M/s KTwo Technologies Solutions Pvt. Ltd., | Mr. Ananth R.Koppar, Ph:080-23148981 Mob:9880160607 |
| 24 | Mundagodu | Maskar M.A. | BCIC | M/s Ericson & Richards (Karwar/Goa) | Capt Eddie Viegas, Ph:0832-2511102 Mob:9422059665 |
| 25 | Guttal | Narayankar P.M | BCIC | M/s Gokak Mills | Mr.Jitender Malik Ph:08332-225004 Email:jmailk@gokakmills.com |
| | | | **GULBARGA DIVISION** | | |
| 26 | Lingasagur | Bheemanna | CII | M/s Ever Onn Systems India Ltd., | Vinod. M.M. Ph:9444397381 |

ಎ.ಎಸ್. ವಿಶ್ವೇಶ್ವರಯ್ಯ
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

ಪಿ.ಆರ್. 2327

## ಶಿಕ್ಷಣ ಸಚಿವಾಲಯ

**ವಿಷಯ:** ಸರ್.ಎಂ. ವಿಶ್ವೇಶ್ವರಯ್ಯ ನಗರಸಭಾ ಅನುದಾನಿತ ಪ್ರಥಮ ದರ್ಜೆ ಸಂಜೆ ಕಾಲೇಜನ್ನು "ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು" ಎಂದು ಪರಿವರ್ತಿಸಿ ಸರ್ಕಾರದ ವಶಕ್ಕೆ ತೆಗೆದುಕೊಳ್ಳುವ ಬಗ್ಗೆ ಆದೇಶ.

**ಓದಲಾಗಿದೆ:** 1) ಚಿಕ್ಕಬಳ್ಳಾಪುರದ ನಗರಸಭೆಯ ಠರಾವು ದಿನಾಂಕ: 15–10–2003

2) ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ: ಕಾಶಿಆ/43/ಸರ್ಕಾರದ ವಶ (ಸಿವಿ–1) ಪಿಸಿಸಿ–1–2004 ದಿನಾಂಕ: 06–07–2007

3) ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ಇವರ ಪತ್ರ ಸಂಖ್ಯೆ: ಜಿನಕೋ.ಚಿ.ಸಿ(2) ಸಿಆರ್.80/07–08 ದಿನಾಂಕ: 18–02–2009

4) ನಗರಾಭಿವೃದ್ಧಿ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ನಅಇ–118–ಬಿಎಂಎಸ್–2007 ದಿನಾಂಕ:24–01–2009

5) ದಿನಾಂಕ: 11–11–2009ರಂದು ನಡೆದ ಸಚಿವ ಸಂಪುಟ ಸಭೆಯ ನಿರ್ಣಯ

**ಪ್ರಸ್ತಾವನೆ:**

ಚಿಕ್ಕಬಳ್ಳಾಪುರ ಪುರಸಭೆಯು 1968ರಲ್ಲಿ ಹಲವು ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದ್ದು, ಅದರಂತೆ ಸರ್.ಎಂ. ವಿಶ್ವೇಶ್ವರಯ್ಯ ಪುರಸಭಾ ಅನುದಾನಿತ ಪ್ರಥಮ ದರ್ಜೆ ಸಂಜೆ ಕಾಲೇಜನ್ನು 1968ರಲ್ಲಿ ಪುರಸಭಾ ಪ್ರಥಮ ದರ್ಜೆ ಹಗಲು ಕಾಲೇಜನ್ನು 1994ರಲ್ಲಿ ಫಾರ್ಮಸಿ ಕಾಲೇಜನ್ನು 1989ರಲ್ಲಿ ದೈಹಿಕ ಶಿಕ್ಷಣ ಕಾಲೇಜನ್ನು 2008ರಲ್ಲಿ ಬಿ.ಇಡಿ. ಕಾಲೇಜನ್ನು ಸರ್ಕಾರಕ್ಕೆ ವಹಿಸಿಕೊಡಲಾಗಿದೆ. ಮೇಲೆ (1)ರಲ್ಲಿ ಓದಲಾದ ದಿನಾಂಕ: 15–10–2003ರ ಠರಾವಿನಲ್ಲಿ ಸಂಜೆ ಕಾಲೇಜನ್ನು ಕಟ್ಟಡ ಸಮೇತ ಸರ್ಕಾರದ ವಶಕ್ಕೆ ತೆಗೆದುಕೊಳ್ಳುವಂತೆ ಕೋರಿರುತ್ತಾರೆ. ಮೇಲೆ (2)ರಲ್ಲಿ ಓದಲಾದ ದಿನಾಂಕ: 06–07–2007ರ ಕಾಲೇಜು ಶಿಕ್ಷಣ ಆಯುಕ್ತರ ಪ್ರಸ್ತಾವನೆಯಲ್ಲಿ ಸದರಿ ಕಾಲೇಜಿನಲ್ಲಿ 7 ಜನ ಬೋಧಕರು ಮತ್ತು 15 ಜನ ಬೋಧಕೇತರರು ಕರ್ತವ್ಯ ನಿರ್ವಹಿಸುತ್ತಿದ್ದು, ಈ ಪೈಕಿ ಒಬ್ಬ ಪ್ರಾಂಶುಪಾಲರು ಗ್ರೇಡ್–1 ಹಾಗೂ 4 ಜನ ಬೋಧಕೇತರರಿಗೆ ಕಾಲೇಜು ಶಿಕ್ಷಣ ಇಲಾಖೆ ವೇತನ ಭರಿಸುತ್ತಿದ್ದು, ಉಳಿದ 6 ಮಂದಿ ಬೋಧಕ ಹಾಗೂ 11 ಮಂದಿ ಬೋಧಕೇತರ ವರ್ಗದವರಿಗೆ ನಗರಾಭಿವೃದ್ಧಿ ಇಲಾಖೆಯ ಎಸ್‌ಎಫ್‌ಸಿ ಅನುದಾನದಿಂದ ವೇತನ ಭರಿಸುತ್ತಿದೆ. ಕಾಲೇಜನ್ನು ಸರ್ಕಾರಕ್ಕೆ ವಹಿಸಿಕೊಂಡು ಸರ್ಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜನ್ನಾಗಿ ಪರಿವರ್ತಿಸಿದಲ್ಲಿ ಈ ಜಿಲ್ಲೆಯ ಹೆಣ್ಣು ಮಕ್ಕಳ ವಿದ್ಯಾಭ್ಯಾಸಕ್ಕೆ ಅನುಕೂಲವಾಗುತ್ತದೆಂದು ವರದಿ ಸಲ್ಲಿಸಿರುತ್ತಾರೆ. ಈ ಕಾಲೇಜಿನ ಪ್ರಾಂಗಣದ ಒಟ್ಟು ವಿಸ್ತೀರ್ಣ 1,07,991 ಚದರಡಿಗಳು, ಇದರಲ್ಲಿ ಸಂಜೆ ಕಾಲೇಜಿಗೆ ಸೇರಿದ ಕಟ್ಟಡ ಹಾಗೂ ನಿವೇಶನ 17,615 ಚದರ ಅಡಿ ಇರುತ್ತದೆ. ಈ ಹಿಂದೆ ಅಕ್ಟೋಬರ್ 1986ರಲ್ಲಿ ಸರ್ಕಾರವು ಹಗಲು ಕಾಲೇಜನ್ನು ತನ್ನ ವಶಕ್ಕೆ ತೆಗೆದುಕೊಂಡ ನಂತರ ಈ ಸ್ವತ್ತಿನ ಭಾಗವಾದ 90,376 ಚದರಡಿಗಳ ಕಟ್ಟಡ ಮತ್ತು ನಿವೇಶನವನ್ನು ಪೌರಾಡಳಿತ ನಿರ್ದೇಶನಾಲಯದ ಆದೇಶ ಸಂಖ್ಯೆ: ಪೌನಿ:ಸಿಬ್ಬಂದಿ:ಕೋಜಿ:ಸಿಆರ್23–98–99 ದಿನಾಂಕ: 19–09–2003ರಂತೆ ಸದರಿ ಕಟ್ಟಡದಲ್ಲಿ ಸಂಜೆ ಕಾಲೇಜನ್ನು ನಡೆಸುವ ಷರತ್ತಿಗೊಳಪಟ್ಟು ಕಾಲೇಜು ಶಿಕ್ಷಣ ಇಲಾಖೆಗೆ ಖಾತೆಯನ್ನು ವರ್ಗಾಯಿಸಿದೆ. ಆದಾಗ್ಯೂ ಈ ಕಟ್ಟಡ ಮತ್ತು ನಿವೇಶನದ ವರ್ಗಾವಣೆ, ದಾಖಲೆಗಳ ನೋಂದಣಿ ಇನ್ನೂ ಆಗಿರುವುದಿಲ್ಲ. ಸಂಜೆ ಕಾಲೇಜು ಮತ್ತು ಸಿಬ್ಬಂದಿಯನ್ನು ಸರ್ಕಾರದ ವಶಕ್ಕೆ ತೆಗೆದುಕೊಂಡಲ್ಲಿ ಮಾತ್ರ ಈ ಎಲ್ಲಾ ಸ್ವತ್ತನ್ನು ಸರ್ಕಾರದ ವಶಕ್ಕೆ ನೋಂದಣಿ ಮುಖೇನ ವರ್ಗಾಯಿಸಲಾಗುವುದೆಂದು ಮೇಲೆ (3)ರಲ್ಲಿ ಓದಲಾದ ದಿನಾಂಕ: 18–02–2009ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು ಹಾಗೂ ಪುರಸಭೆಯವರು ತಿಳಿಸಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ದಿನಾಂಕ: 24–01–2009ರ ಅನಧಿಕೃತ ಟಿಪ್ಪಣಿಯಲ್ಲಿ ನಗರಾಭಿವೃದ್ಧಿ ಇಲಾಖೆಯು ಚಿಕ್ಕಬಳ್ಳಾಪುರ ಜಿಲ್ಲಾಡಳಿತ, ಜಿಲ್ಲೆಗೆ ಅಗತ್ಯವಾದ ಪ್ರಥಮ ದರ್ಜೆ ಮಹಿಳಾ ಕಾಲೇಜನ್ನು ಪ್ರಾರಂಭಿಸುವಂತೆ ಮಾಡಿರುವ ಶಿಫಾರಸ್ಸಿನಂತೆ ಹಾಲಿ ನಗರಸಭಾ ಅನುದಾನಿತ ಪ್ರಥಮ ದರ್ಜೆ ಸಂಜೆ ಕಾಲೇಜನ್ನು ಮಹಿಳಾ ಕಾಲೇಜನ್ನಾಗಿ ಪರಿವರ್ತಿಸುವ ಷರತ್ತಿನೊಡನೆ ಈ ಕಾಲೇಜಿನ ಬೋಧಕ ಹಾಗೂ ಬೋಧಕೇತರ ಸಿಬ್ಬಂದಿಯನ್ನು ಕಾಲೇಜು ಶಿಕ್ಷಕ ಇಲಾಖೆಗೆ ಹಸ್ತಾಂತರಿಸಲು ಪೌರಾಡಳಿತ ನಿರ್ದೇಶಕರ ಅಭಿಪ್ರಾಯಕ್ಕೆ ನಗರಾಭಿವೃದ್ಧಿ ಇಲಾಖೆಯು ಸಹಮತಿಸಿದೆ. ದಿನಾಂಕ: 11–11–2009ರಂದು ನಡೆದ ಸಚಿವ ಸಂಪುಟ ಸಭೆಯಲ್ಲಿ ಈ ಪ್ರಸ್ತಾವನೆಯನ್ನು ಸಚಿವ ಸಂಪುಟವು ಅನುಮೋದಿಸಿದೆ. ಈ ಹಿನ್ನೆಲೆಯಲ್ಲಿ ಚಿಕ್ಕಬಳ್ಳಾಪುರದ ನಗರಸಭಾ ಆಶ್ರಯದಲ್ಲಿ ನಡೆಸುತ್ತಿರುವ ಅನುದಾನಿತ ಸಂಜೆ ಕಾಲೇಜನ್ನು "ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು" ಎಂದು ಪರಿವರ್ತಿಸಿ ಸರ್ಕಾರದ ವಶಕ್ಕೆ ವಹಿಸಿಕೊಳ್ಳುವ ಬಗ್ಗೆ ಪರಿಶೀಲಿಸಿ ಕೆಲವು ಷರತ್ತುಗಳೊಂದಿಗೆ ಸದರಿ ಕಾಲೇಜನ್ನು ಸರ್ಕಾರದ ವಶಕ್ಕೆ ವಹಿಸಿಕೊಳ್ಳಲು ನಿರ್ಧರಿಸಿದೆ. ಆದುದರಿಂದ ಈ ಆದೇಶ.

**ಆದೇಶ ಸಂಖ್ಯೆ : ಇಡಿ 147 ಯುಪಿಸಿ 2007 ಬೆಂಗಳೂರು, ದಿನಾಂಕ: 30ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಚಿಕ್ಕಬಳ್ಳಾಪುರದ ನಗರಸಭೆಯ ಆಶ್ರಯದಲ್ಲಿ ನಡೆಸಲ್ಪಡುತ್ತಿರುವ ಸರ್.ಎಂ. ವಿಶ್ವೇಶ್ವರಯ್ಯ ನಗರಸಭಾ ಅನುದಾನಿತ ಪ್ರಥಮ ದರ್ಜೆ ಸಂಜೆ ಕಾಲೇಜನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ವಶಕ್ಕೆ ವಹಿಸಿಕೊಂಡು ಇದನ್ನು ""ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು" ಎಂದು ಪರಿವರ್ತಿಸಲಾಗಿದೆ.

ಅ) ಚಿಕ್ಕಬಳ್ಳಾಪುರದ ನಗರ ಸಭೆಯು ಕಾನೂನು ರೀತ್ಯ ಸದರಿ ಸಂಜೆ ಕಾಲೇಜನ್ನು ಅದಕ್ಕೆ ಸೇರಿದ ಎಲ್ಲಾ ಚರ–ಚಿರಾಸ್ತಿಗಳನ್ನು ಸರ್ಕಾರದ ವಶಕ್ಕೆ ಹಸ್ತಾಂತರಿಸುವುದು.

ಆ) ಈ ಹಿಂದೆ ಅಕ್ಟೋಬರ್ 1986ರಲ್ಲಿ ಸರ್ಕಾರವು ಹಗಲು ಕಾಲೇಜನ್ನು ತನ್ನ ವಶಕ್ಕೆ ತೆಗೆದುಕೊಳ್ಳುವಾಗ ನಿರ್ಮಿಸಿರುವ ಕಾಲೇಜಿನ ಒಟ್ಟು ವಿಸ್ತೀರ್ಣದ ಕಟ್ಟಡ ತಮ್ಮ ನಿವೇಶನ ಅಲ್ಲದೇ ನಗರಾಭಿವೃದ್ಧಿ ಇಲಾಖೆ ಹಾಗೂ ಸಿಟಿ ಮುನ್ಸಿಪಲ್ ಕೌನ್ಸಿಲ್ ಕಾಲೇಜಿಗೆ ಸೇರಿದ ನಿವೇಶನ ವಿಸ್ತೀರ್ಣ 1,07,989 ಚದುರ ಅಡಿ ಮತ್ತು ಕಟ್ಟಡದ ವಿಸ್ತೀರ್ಣ 40,091 ಚದರ ಅಡಿ ಇವುಗಳನ್ನು ಯಾವ ಸ್ಥಿತಿಯಲ್ಲಿರುತ್ತವೆಯೋ ಅದೇ ಸ್ಥಿತಿಯಲ್ಲಿ ಕಾಲೇಜು ಶಿಕ್ಷಣ ಇಲಾಖೆಗೆ ಸಂಜೆ ಕಾಲೇಜನ್ನು ವರ್ಗಾಯಿಸತಕ್ಕದ್ದು.

ಇ) ಸದರಿ ಕಾಲೇಜಿನಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ 7 ಬೋಧಕರು (ಗ್ರೇಡ್–1 ಪ್ರಾಂಶುಪಾಲರು ಮತ್ತು 6 ಆಯ್ಕೆ ಶ್ರೇಣಿ ಉಪನ್ಯಾಸಕರು) ಹಾಗೂ 15 ಬೋಧಕೇತರ ಸಿಬ್ಬಂದಿ ವರ್ಗದವರನ್ನು ತಜ್ಞ ಸಮಿತಿಯವರಿಂದ ಸೂಕ್ತ ಪರಿಶೀಲನೆಯಾದ ನಂತರ ಈ ಬಗ್ಗೆ ವಿಶೇಷ ನಿಯಮಗಳನ್ನು ರಚಿಸಿ ಅರ್ಹ ಸಿಬ್ಬಂದಿಗಳ ಸೇವೆಯನ್ನು ಸರ್ಕಾರದ ಸೇವೆಯಲ್ಲಿ ವಿಲೀನಗೊಳಿಸಲಾಗುವುದು.

ಈ) ಸದರಿ ಸಂಸ್ಥೆಯಲ್ಲಿ ಸೇವೆ ಸಲ್ಲಿಸುತ್ತಿರುವ ಎಲ್ಲಾ ಅರ್ಹ ಬೋಧಕ ಮತ್ತು ಬೋಧಕೇತರ ಸಿಬ್ಬಂದಿ ವರ್ಗದವರನ್ನು ಸರ್ಕಾರ ಸೇವೆಯಲ್ಲಿ ವಿಲೀನಗೊಳಿಸುವ ಬಗ್ಗೆ ಸರ್ಕಾರಿ ಆದೇಶವನ್ನು ಪ್ರತ್ಯೇಕವಾಗಿ ಹೊರಡಿಸುವವರೆವಿಗೂ ಎಲ್ಲಾ ಸಿಬ್ಬಂದಿಯನ್ನು ಆಯಾ ಹುದ್ದೆಯಲ್ಲಿಯೇ ಮುಂದುವರೆಸುವುದು. ಹಾಗೂ ಬೋಧಕ ಹಾಗೂ ಬೋಧಕೇತರ ಸಿಬ್ಬಂದಿಯ ಸೇವಾ ಹಿರಿತನವನ್ನು ಮತ್ತು ವೇತನ ಶ್ರೇಣಿಯನ್ನು ಯಥಾವತ್ತಾಗಿ ಕಾಪಾಡಿಕೊಳ್ಳತಕ್ಕದ್ದು.

ಉ) ಚಿಕ್ಕಬಳ್ಳಾಪುರ ಪುರಸಭೆಯ ಆಶ್ರಯದಲ್ಲಿ ನಡೆಸುತ್ತಿರುವ ಈ ಸಂಜೆ ಕಾಲೇಜಿನ ಯಾವುದೇ ದಾಯಿತ್ವಕ್ಕೆ (liability) ಸರ್ಕಾರವು ಹೊಣೆಯಾಗಲಾರದು. ಹಾಗೂ ಸರ್ಕಾರವು ಸದರಿ ಕಾಲೇಜನ್ನು ತನ್ನ ವಶಕ್ಕೆ ತೆಗೆದುಕೊಂಡ ನಂತರ ಯಾವುದೇ ನ್ಯಾಯಾಲಯದ ತೀರ್ಪಿನ ಹಿನ್ನೆಲೆಯಲ್ಲಿ ಅಥವಾ ಇನ್ನಿತರೆ ಕಾರಣಗಳ ಹಿನ್ನೆಲೆಯಲ್ಲಿ ದಾಯಿತ್ವದ ಬಗ್ಗೆ ಸಮಸ್ಯೆ ಉದ್ಭವವಾದಲ್ಲಿ ಕಾಲೇಜಿನ ಹಿಂದಿನ ಆಡಳಿತ ಮಂಡಳಿಯೇ ಹೊಣೆಯಾಗಿರತಕ್ಕದ್ದು.

ಊ) ಸರ್ಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜಾಗಿ ಪರಿವರ್ತನೆಗೊಂಡಿರುವ ಈ ಕಾಲೇಜಿನಲ್ಲಿ 2010–2011ನೇ ಶೈಕ್ಷಣಿಕ ಸಾಲಿನಿಂದ ಪ್ರಥಮ ಪದವಿ ತರಗತಿಗಳಿಗೆ ಮಹಿಳಾ ವಿದ್ಯಾರ್ಥಿಗಳನ್ನು ದಾಖಲಾತಿ ಮಾಡಿಕೊಳ್ಳತಕ್ಕದ್ದು.

ಸದರಿ ಕಾಲೇಜನ್ನು ಸರ್ಕಾರದ ವಶಕ್ಕೆ ಪಡೆದುಕೊಂಡ ನಂತರ ಚಿಕ್ಕಬಳ್ಳಾಪುರ ಪುರಸಭೆಯ ಅನುದಾನಿತ ಸಂಜೆ ಕಾಲೇಜಿನ ಸಮಸ್ತ ಕಟ್ಟಡ ಮತ್ತು ಇನ್ನಿತರ ಎಲ್ಲಾ ಮೂಲಭೂತ ಸೌಕರ್ಯವು ಸರ್ಕಾರದ ಮೂಲ ಮಾಲಿಕತ್ವಕ್ಕೆ ಬರಲಿದ್ದು, ಅವುಗಳನ್ನು ಶೈಕ್ಷಣಿಕ ಉದ್ದೇಶಗಳಿಗಾಗಿಯೇ ಉಪಯೋಗ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2828 **ಎಸ್.ಎಂ. ನಂದಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಕಾಲೇಜು ಶಿಕ್ಷಣ)

**ವಿಷಯ:** ಕು: ವೇದಾವತಿ ಎನ್. ಅರ್ಥಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹೆಬ್ರಿ ಇವರ ಹೆಸರು ಬದಲಾವಣೆ ಕುರಿತು.

**ಓದಲಾಗಿದೆ:** 1) ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ: ಕಾಶಿಇ:24/ಹೆಬ/2006/ಸಿವಿ–2 ದಿನಾಂಕ: 12–12–2007 ಮತ್ತು 24–01–2009

2) ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್:1:ಡಿಸಿಎನ್:66 ದಿನಾಂಕ: 08–03–1967.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಕಾಲೇಜು ಶಿಕ್ಷಣ ಆಯುಕ್ತರ ಪತ್ರಗಳಲ್ಲಿ ಕು: ವೇದಾವತಿ ಎನ್. ಅರ್ಥಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹೆಬ್ರಿ ಇವರು ತಮ್ಮ ಸ್ವಇಚ್ಛೆಯಿಂದ, ಇವರ ಹೆಸರನ್ನು ವೇದಶ್ರೀ ನಿಡ್ಯ ಎಂದು ಬದಲಾಯಿಸಿಕೊಳ್ಳಲು ಇಚ್ಛಿಸಿರುವುದಾಗಿ ತಿಳಿಸಿ ಇದಕ್ಕೆ ಸಂಬಂಧಿಸಿದ ದಾಖಲೆಗಳನ್ನು ಕಾಲೇಜು ಶಿಕ್ಷಣ ಆಯುಕ್ತರು ಒದಗಿಸಿರುತ್ತಾರೆ. ಮೇಲೆ (2)ರಲ್ಲಿ ಓದಲಾದ ದಿನಾಂಕ: 08–03–1967ರ ಸರ್ಕಾರಿ ಆದೇಶದಲ್ಲಿ ಇಂತಹ ಪ್ರಕರಣಗಳಿಗೆ ಸಂಬಂಧಿಸಿದಂತೆ ಅವಕಾಶಗಳನ್ನು ಕಲ್ಪಿಸಲಾಗಿರುತ್ತದೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಡಿ 292 ಡಿಸಿಇ 2009, ಬೆಂಗಳೂರು, ದಿನಾಂಕ: 30ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕು: ವೇದಾವತಿ ಎನ್. ಅರ್ಥಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹೆಬ್ರಿ ಇವರು ತಮ್ಮ ಸ್ವಇಚ್ಛೆಯಿಂದ, ಇವರ ಹೆಸರನ್ನು ವೇದಶ್ರೀ ನಿಡ್ಯ ಎಂದು ಬದಲಾಯಿಸಿಕೊಳ್ಳಲು ಸರ್ಕಾರ ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2829

**ಎಸ್.ಎಂ. ನಂದಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಕಾಲೇಜು ಶಿಕ್ಷಣ)

**ENERGY SECRETARIAT**

**CORRIGENDUM No. EN 28 PSR 2009, Bangalore, Dated: 11th December 2009**

The Words and figures **"Gratuity of Rs. 43833/-"** appearing in first para of the Preamble portion of the Government Order No. EN 28 PSR 2009 dated: 10-8-2009 shall be read as **"Gratuity of Rs. 45833/-"**

By Order and in the name of Governor of Karnataka

P.R. 2830

**S.J. SAMPATH KUMAR**

Under Secretary to Government, Energy Department.

**INFORMATION TECHNOLOGY, BIOTECHNOLOGY AND SCIENCE AND TECHNOLOGY SECRETARIAT**

**Sub:** Approval of the project proposal of M/s Kemwell Pvt. Ltd., for manufacture of "Biopharmaceutical products and R&D centre" at Nelamangala Taluk, Bangalore Rural District.

**Read:** 1. Proceedings of the 18th State High Level Clearance Committee (SHLCC) meeting held on 21.6.2009.

2. Proceedings of the meeting held on 3.11.2009 under the Chairmanship of Principal Secretary to Govt. C&I Department.

**Preamble:**

M/s Kemwell Pvt. Ltd., has proposed to establish 100% EOU Biotech manufacturing facility for Biopharmaceutical products like Monoclonal antibody & Therapeutic proteins (0.05MT) and R&D in 7 acres 15 Guntas of own industrially converted land of T. Begur Village, Nelamangala, Bangalore Rural District in 7 acres 15 guntas of industrially converted own land at Sy. Nos. 46/1, 37/2, 37/3, 37/4, 37/5, 38/1, 38/2, 41/1, 41/2, 41/3, 42, 43, 46/2 of T Begur Village, Nelamangala, Bangalore Rural District. The project proposes to provide employment to about 200 persons and proposed to invest Rs.257 crores.

The Committee noted that this unit will be 100% export oriented unit. The proposed location is close to Tippagondanahalli reservoir. Therefore, it was decided to accord approval in principle as the activity proposed is basically on R & D and 100% EOU. But approval will be subject to clearance by a Committee constituted for this purpose, chaired by Principal Secretary, Commerce & Industries Department. Members are Secretary, Ecology, Forest and Environment, M.D. BWSSB and Member Secretary KSPCB, Subsequently the project was given clearance in the meeting held on 3.11.2009 under the Chairmanship of Principal Secretary to Govt. C&I Department.

After detailed discussions, the State High Level Clearance Committee has approved in principle the proposal to establish "Biotech manufacturing facility for Biopharmaceutical products and R&D Centre" and recommended to grant infrastructure facilities, and extend incentives and concessions.

In the meeting held under the chairmanship of Principal Secretary to Government, C&I Department vide proceedings read at [2] above, the Committee has agreed to give formal clearance for the proposal subject to a condition that the company will implement the project as per KSPCB and environmental norms.

Hence the following order.

**Government Order No. ITD 24 MDA 2009[1], Bangalore, Dated: 24th November 2009**

In the circumstances explained in the Preamble, Government are pleased to accord approval to M/s Kemwell Pvt. Ltd to establish "Biotech manufacturing facility for Biopharmaceutical products and R&D Centre in 7 acres 15 Guntas has of own industrially converted land at T. Begur village, Nelamangala, Bangalore Rural District for the project, with an investment of Rs.257 crores subject to a condition that the company will implement the project as per KSPCB and environmental norms and extended the following infrastructure facilities, incentives and concessions.

**INFRASTRUCTURE FACILITIES:**

**LAND:** The Company is permitted to establish the project in 7 acres 15 guntas of industrially converted own land at Sy. Nos. 46/1, 37/2, 37/3, 37/4, 37/5, 38/1, 38/2, 41/1, 41/2, 41/3, 42, 43, 46/2 of T Begur Village, Nelamangala, Bangalore Rural District.

**POWER:** 5625 KVA to be serviced by BESCOM.

**WATER:** 0.2 MLD to be met out from borewells.

**INCENTIVES & CONCESSIONS:**

As applicable under Bio Tech Policy of the State.

Environment: The promoters to obtain CFE and CFO from KSPCB and Environmental Clearance from MOEF, GOI.

**Employment:** The Company shall prepare a plan for development of human resource required for the project, train local people and provide employment to these trained local youth and comply with Government policy of employment to local people. A copy of human resource development plan shall be sent to the Director of IT & Biotechnology for monitoring.

**Social Infrastructure Development:** The Company is advised to take up social infrastructure development projects in the vicinity of proposed location of the unit. A copy of such projects shall be sent to the Director of IT & Biotechnology for monitoring.

**Vendor Development:** Where ever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Director of IT & Biotechnology for monitoring.

**Social Infrastructure Development:** The Company is advised to take up social infrastructure development projects in the vicinity of proposed location of the unit. A copy of such projects shall be sent to the Director of IT & Biotechnology for monitoring.

**Others:** The promoter shall take all statutory and other necessary clearances including GOI & shall submit milestones/progress in implementation of the project regularly, which will be monitored by the Departments concerned.

By Order and in the name of the Governor of Karnataka

**M.V. KRISHNAMURTHY**

P.R. 2658

Under Secretary to Government,

Department of Information Technology, Bio Technology and Science & Technology

**Sub:** Approval of the project proposal of M/s Larsen & Turbo Ltd., to establish IT/ITES SEZ" at Hebbal Hootagalli Industrial area, Mysore.

**Read:** Proceedings of the 18th State High Level Clearance Committee (SHLCC) meeting held on 24.6.2009.

**Preamble:**

M/s Larsen & Turbo Ltd. is a Public Limited Company incorporated under Indian Companies Act. The company operates through multiple divisions:

- Engineering & Construction Projects.
- Construction.
- Heavy Engineering.
- Electrical & Electronics.
- IT & Technology Services.
- Machinery & Industrial Products.

The L & T team comprises over 35000 people worldwide. The company's wide shareholder base exceeds 4 lakhs.

M/s Larsen & Turbo Ltd., has proposed to establish Sector specific SEZ for IT & ITES in 10 hectares (24.71 acres) Nos. 323, 324, 325, 326, 327, 328, 329, 330, 331, KIADB – Industrial Area, Hebbal- Hootagalli Industrial Area, Mysore District. The project proposes to provide employment to about 11000 persons and proposed to invest Rs.615 crores.

After detailed discussion, the State High Level Clearance Committee approved the proposal of the company to establish "Sector specific SEZ for IT & IT Enabled Services" at KIADB Industrial Area, Hebbal-Hootagalli Industrial Area, Mysore, and recommended to grant infrastructure facilities and extend incentives and concessions.

Hence the following order:

**Government Order No. ITD 24 MDA 2009[2], Bangalore, Dated: 24th November 2009**

In the circumstances explained in the Preamble, Government are pleased to accord approval to M/s Larsen & Turbo Ltd., to establish "Sector specific SEZ for IT & IT Enabled Services" at KIADB Industrial Area, Hebbal-Hootagalli Industrial Area, Mysore for the project, with an investment of Rs.615 crores and extended the following infrastructure facilities, incentives and concessions.

**INFRASTRUCTURE FACILITIES:**

**LAND:** To establish SEZ in 10 hectares (24.71 acres) of land owned by the company at Plot Nos. 323, 324, 325, 326, 327, 328, 329, 330, 331, KIADB Industrial Area, Hebbal-Hootagalli Industrial Area, Mysore, Mysore District.

**POWER:** 11000 KVA Power to be serviced by CESCOM.

**WATER:** 0.5 MLD to be supplied by KIADB.

**INCENTIVES & CONCESSIONS:**

As applicable under IT Policy of the State and as applicable under SEZ Policy of the State and of GOI.

Environment: The promoters to obtain CFE and CFO from KSPCB and Environmental Clearance from MOEF, GOI.

**Employment:** The Company shall prepare a plan for development of human resource required for the project, train local people and provide employment to these trained local youth and comply with Government policy of employment to local people. A copy of human resource development plan shall be sent to the Director of IT & Biotechnology for monitoring.

**Social Infrastructure Development:** The Company is advised to take up social infrastructure development projects in the vicinity of proposed location of the unit. A copy of such projects shall be sent to the Director of IT & Biotechnology for monitoring.

**Others:** The promoter shall take all statutory and other necessary clearances including GOI & shall submit milestones/progress in implementation of the project regularly, which will be monitored by the Departments concerned.

By Order and in the name of the Governor of Karnataka

**M.V. KRISHNAMURTHY**

P.R. 2659 Under Secretary to Government,

Department of Information Technology, Bio Technology and Science & Technology

**Sub:** Approval of the project proposal of M/s Chandra Developers Pvt. Ltd., to establish "IT/ITES Park" at Devanahalli Taluk, Bangalore Rural District.

**Read:** Proceedings of the 18th State High Level Clearance Committee (SHLCC) meeting held on 24.6.2009.

**Preamble:**

M/s Chandra Developer Pvt. Ltd. is a Private Limited Company incorporated under Indian Companies Act. 1956, on 18th August, 1997, in Bangalore.

M/s Chandra Developer Pvt. Ltd is a flagship company of Bagmane Group, Bagmane Group has developd a modern tech park in 52 acres of land at C.V. Raman Nagar, Bangalore. This tech park houses many reputed companies such as Motorola, Texas Instruments, iflex, Dell, Samsung, Volvo, Mphasis, Cognizant Technologies, HP and many other software companies. This software park is one of the most prestigious technology center in Karnataka.

At present Bagmane Group is developing an SEZ at Ring road, Mahadevapura, Bangalore with a total built-up area of about 7 Million sq.ft.

M/s Chandra Developer Pvt. Ltd., has proposed to establish IT/ITES Park in 25 acres of land, in KIADB Industrial Area, near Bangalore International Airport, Devanahalli Taluk, Bangalore Rural District. The project proposes to provide employment to about 39400 persons and proposed to invest Rs. 459.98 crores.

After detailed discussions, the State High Level Clearance Committee in its 18th meeting held on 24.6.2009, approved the proposal of the company to establish an "IT/ITES Park" at KIADB Industrial Area, near Bangalore International Airport, Devanahalli Taluk, Bangalore Rural District and recommended to grant infrastructure facilities and extend incentives and concessions.

Hence the following order:

**Government Order No. ITD 24 MDA 2009[3], Bangalore, Dated: 24th November 2009**

In the circumstances explained in the Preamble, Government are pleased to accord approval to M/s Chandra Developer Pvt. Ltd. to establish an "IT/ITES Park" at 25 acres of land in KIADB Industrial Area, near Bangalore International Airport, Devanahalli Taluk, Bangalore Rural District with an investment of Rs.459.98 crores and extended the following infrastructure facilities, incentives and concessions.

**INFRASTRUCTURE FACILITIES:**

**LAND:** KIADB to allot 25 acres of land at KIADB Indusrial Area, near Bangalore International Airport, Devanahalli Taluk, Bangalore Rural District.

**POWER:** 30000 KVA Power to be serviced by BESCOM.

**WATER:** The Committee noted the requirement of water for the project.

**ವಸತಿ ಸಚಿವಾಲಯ**

**ವಿಷಯ:** ಬೀದರ್ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂ. ವಇ 42 ಹೆಚ್‌ಎಎಂ 1999 ದಿನಾಂಕ: 10–05–2000.

2) ಸರ್ಕಾರದ ಆದೇಶ ಸಂ. ವಇ 9 ಹೆಚ್‌ಎಎಂ 2008 ದಿನಾಂಕ: 17–02–2009.

**ಪ್ರಸ್ತಾವನೆ:**

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದ ಬೀದರ್ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸಲಾಗಿದ್ದು, ಖಾಲಿ ಇದ್ದ ಅಲ್ಪಸಂಖ್ಯಾತ ಪ್ರತಿನಿಧಿಯ ಹುದ್ದೆಗೆ ನಾಮನಿರ್ದೇಶಿಸುತ್ತ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ: ವಇ 55 ಹೆಚ್‌ಎಎಸ್ 2009, ಬೆಂಗಳೂರು, ದಿನಾಂಕ: 10ನೇ ಡಿಸೆಂಬರ್ 2009**

ಬೀದರ್ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ. ಮಹಮದ್ ಬಿನ್ ಆಲಿ ತಂದೆ ಮೀರ್ ಖುರ್ಷೀದ್ ಆಲಿ, 04–01–116, ನುರ್ಖಾತಾಲಿಂ, ಮುಸ್ಲಿಂ ಚೌಕ್, ಬೀದರ್ | ಅಲ್ಪಸಂಖ್ಯಾತ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2833

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ.

**ವಿಷಯ:** ಪ್ರವಾಹಪೀಡಿತರಿಗೆ ಮನೆ ನಿರ್ಮಿಸಿಕೊಳ್ಳಲು ನಿವೇಶನ ಖರೀದಿಗಾಗಿ ಅನುದಾನ ಬಿಡುಗಡೆ ಕುರಿತು.

**ಓದಲಾಗಿದೆ:** ಸರ್ಕಾರದ ಆದೇಶ ಸಂ. ಆಇ 133 ಬಿಆರ್‌ಎಸ್ 2009 ದಿನಾಂಕ: 23–11–2009.

**ಪ್ರಸ್ತಾವನೆ:**

ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ದಿನಾಂಕ: 29–09–2009ರಿಂದ 4–10–2009ರವರೆಗೆ ಸುರಿದ ಧಾರಾಕಾರ ಮಳೆಯಿಂದ ಹಾಗೂ ಪ್ರವಾಹದಿಂದ ಮನೆಗಳನ್ನು ಕಳೆದುಕೊಂಡವರಿಗೆ ಸುರಕ್ಷಿತ ಸ್ಥಳಗಳಲ್ಲಿ ಮನೆಗಳ ನಿರ್ಮಾಣಕ್ಕಾಗಿ ನಿವೇಶನಗಳನ್ನು ರಚಿಸಲು ಖಾಸಗಿ ಜಮೀನು ಖರೀದಿಸಲು 12 ಜಿಲ್ಲೆಗಳಿಗೆ ಈವರೆಗೆ ಒಟ್ಟು 146.04 ಕೋಟಿ ರೂ.ಗಳನ್ನು ಬಿಡುಗಡೆ ಮಾಡಲಾಗಿದೆ. ಬಳ್ಳಾರಿ, ಧಾರವಾಡ, ಹಾವೇರಿ ಹಾಗೂ ದಾವಣಗೆರೆ ಜಿಲ್ಲಾಧಿಕಾರಿಗಳು ನಿವೇಶನಗಳಿಗಾಗಿ ಜಮೀನು ಖರೀದಿಸಲು ಇನ್ನೂ ಹೆಚ್ಚಿನ ಅನುದಾನ ಬಿಡುಗಡೆ ಮಾಡುವಂತೆ ಕೋರಿರುವ ಮೇರೆಗೆ ಹೆಚ್ಚುವರಿ ಅನುದಾನ ಬಿಡುಗಡೆ ಮಾಡಲು ಈ ಕೆಳಗಿನಂತೆ ಆದೇಶವನ್ನು ಪ್ರಸ್ತಾಪಿಸಿದೆ.

**ಸರ್ಕಾರದ ಆದೇಶ ಸಂ: ವಇ 16 ಹೆಚ್‌ಎವೈ 2009(ಭಾ), ಬೆಂಗಳೂರು, ದಿನಾಂಕ: 11ನೇ ಡಿಸೆಂಬರ್ 2009**

ಇತ್ತೀಚೆಗೆ ಉಂಟಾದ ನೆರೆಹಾವಳಿಯಿಂದ ಮನೆಗಳನ್ನು ಕಳೆದುಕೊಂಡು ತೊಂದರೆಗೊಳಗಾದವರಿಗೆ ಮನೆಗಳ ನಿರ್ಮಾಣಕ್ಕಾಗಿ ನಿವೇಶನಗಳಿಗಾಗಿ ಜಮೀನು ಖರೀದಿಸಲು ಬಳ್ಳಾರಿ ಜಿಲ್ಲೆಗೆ 2.00 ಕೋಟಿ ರೂ.ಗಳು ಧಾರವಾಡ ಜಿಲ್ಲೆಗೆ, 2.00 ಕೋಟಿ ರೂ.ಗಳು, ಹಾವೇರಿ ಜಿಲ್ಲೆಗೆ 1.00 ಕೋಟಿ ರೂ.ಗಳು ಹಾಗೂ ದಾವಣಗೆರೆ ಜಿಲ್ಲೆಗೆ 4.00 ಕೋಟಿ ರೂ.ಗಳು ಹೀಗೆ ಒಟ್ಟು 9.00 ಕೋಟಿ ರೂ.ಗಳನ್ನು (ಒಂಭತ್ತು ಕೋಟಿ ರೂ.ಗಳು ಮಾತ್ರ) ಲೆಕ್ಕಶೀರ್ಷಿಕೆ 2216–03–102–0–01–059 (ಯೋಜನೆ) ಅಡಿಯಲ್ಲಿ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮಕ್ಕೆ, ಸರ್ಕಾರದ ಉಪ ಕಾರ್ಯದರ್ಶಿ, ವಸತಿ ಇಲಾಖೆ ಇವರ ಮೇಲು ರುಜುವಿನೊಂದಿಗೆ ಪಡೆಯಲು ಬಿಡುಗಡೆ ಮಾಡಲಾಗಿದೆ.

2) ನೆರೆಹಾವಳಿಯಿಂದ ತೊಂದರೆಗೊಳಗಾದವರಿಗೆ ಮನೆ ನಿರ್ಮಾಣಕ್ಕಾಗಿ ಹಂಚುವ ನಿವೇಶನಗಳಿಗಾಗಿ ಜಮೀನು ಖರೀದಿಸಲು ಮಾತ್ರ ಈ ಅನುದಾನವನ್ನು ಉಪಯೋಗಿಸಿಕೊಳ್ಳತಕ್ಕದ್ದು. ಈ ದಿಸೆಯಲ್ಲಿ ಕಂದಾಯ ಇಲಾಖೆಯ ನಿಯಮಾವಳಿಗಳನ್ನು ಕಟ್ಟುನಿಟ್ಟಾಗಿ ಪಾಲಿಸಲು ಜಿಲ್ಲಾಧಿಕಾರಿಗಳು ವೈಯಕ್ತಿಕವಾಗಿ ಜವಾಬ್ದಾರರಾಗಿರುತ್ತಾರೆ.

3) ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಆಇ 113 ಬಿಆರ್‌ಎಸ್ 2009 ದಿನಾಂಕ: 23–11–2009 ಮೇರೆಗೆ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2834

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಬಿ.ಹೆಚ್. ಸಿದ್ದಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಹಿಂದಿನ ಉಪವಿಭಾಗಾಧಿಕಾರಿ, ಹಾವೇರಿ ಉಪ ವಿಭಾಗ ಹಾಗೂ ಆಡಳಿತಾಧಿಕಾರಿ, ನಗರ ಯೋಜನಾ ಪ್ರಾಧಿಕಾರ, ರಾಣೆಬೆನ್ನೂರು ಇವರ ವಿರುದ್ಧ ಇಲಾಖಾ ವಿಚಾರಣೆ ಅಂತಿಮ ಆದೇಶ

**ಓದಲಾಗಿದೆ:** 1) ದಿನಾಂಕ: 04–07–08ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 252 ಕೆಇವಿ 07

2) ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ, ಹಾವೇರಿ ಹಾಗೂ ವಿಚಾರಣಾಧಿಕಾರಿಗಳು ಇವರ ವಿಚಾರಣಾ ವರದಿ ಸಂಖ್ಯೆ: ಸಿಬ್ಬಂದಿ (1) ಇವಿ:ವಹಿ–87: 2008–09, ದಿನಾಂಕ: 06/05–04–09

3) ದಿನಾಂಕ: 04–07–09ರ ನೋಟೀಸು ಸಂಖ್ಯೆ: ಸಿಆಸುಇ 252 ಕೆಇವಿ 07

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರಿ ಆದೇಶದಲ್ಲಿ, ಶ್ರೀ ಬಿ.ಹೆಚ್. ಸಿದ್ದಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಇವರು ಉಪವಿಭಾಗಾಧಿಕಾರಿ, ಹಾವೇರಿ ಉಪ ವಿಭಾಗ ಹಾವೇರಿ ಹಾಗೂ ಆಡಳಿತಾಧಿಕಾರಿ, ನಗರ ಯೋಜನಾ ಪ್ರಾಧಿಕಾರ, ರಾಣೆಬೆನ್ನೂರು ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಪ್ರಾಧಿಕಾರದ ಕಟ್ಟಡ ನಿರ್ಮಾಣಕ್ಕಾಗಿ ಕರೆಯಲಾದ ಟೆಂಡರಿನಲ್ಲಿ ಕಡಿಮೆ ಮೊತ್ತ ನಮೂದಿಸಿದ ಗುತ್ತಿಗೆದಾರರನ್ನು ಕಡೆಗಣಿಸಿ, ಹೆಚ್ಚಿನ ಮೊತ್ತ ನಮೂದಿಸಿದ ಗುತ್ತಿಗೆದಾರರಿಗೆ ಗುತ್ತಿಗೆ ಮಂಜೂರು ಮಾಡುವ ಮೂಲಕ ಅಧಿಕಾರ ದುರುಪಯೋಗ ಮತ್ತು ಆರ್ಥಿಕ ನಷ್ಟಕ್ಕೆ ಕಾರಣರಾಗಿ ದುರ್ನಡತೆ ಎಸಗಿರುವ ಆರೋಪದಲ್ಲಿನ ಸತ್ಯಾಸತ್ಯತೆಯ ಬಗ್ಗೆ ವಿಚಾರಣೆ ನಡೆಸಿ ವರದಿ ಸಲ್ಲಿಸಲು, ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ, ಹಾವೇರಿ ರವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಉಪ ವಿಭಾಗಾಧಿಕಾರಿ, ಹಾವೇರಿ ಉಪ ವಿಭಾಗ, ಹಾವೇರಿ ರವರನ್ನು ಶಿಸ್ತು ಪ್ರಾಧಿಕಾರಿಯ ಪರವಾಗಿ ಮಂಡನಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ವಿಚಾರಣಾಧಿಕಾರಿಗಳು ಸಲ್ಲಿಸಿದ ವಿಚಾರಣಾ ವರದಿಯಲ್ಲಿ ಶ್ರೀ ಬಿ.ಹೆಚ್. ಸಿದ್ದಪ್ಪ, ರವರು ರಾಣೆಬೆನ್ನೂರು ನಗರ ಯೋಜನಾ ಪ್ರಾಧಿಕಾರದ ಆಡಳಿತಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಪ್ರಾಧಿಕಾರದ ಕಟ್ಟಡ ನಿರ್ಮಾಣದ ಅಂದಾಜು ಪಟ್ಟಿ ರೂ. 25.19 ಲಕ್ಷಗಳ ಕಾಮಗಾರಿಯ ಗುತ್ತಿಗೆಯಲ್ಲಿ ಭಾಗವಹಿಸಿದ ಗುತ್ತಿಗೆದಾರರ ಪೈಕಿ ಒಬ್ಬರು ಅಂದಾಜು ಪಟ್ಟಿಗಿಂತ ಶೇಕಡ 1.04ರಷ್ಟು (-1.04%) ಕಡಿಮೆ ದರ (L1) ಮತ್ತೊಬ್ಬರು ಶೇಕಡ 1.08ರಷ್ಟು (+1.08%) ಹೆಚ್ಚಿನ ದರ (L2) ಇನ್ನೊಬ್ಬರು ಶೇಕಡ 10.94ರಷ್ಟು (+10.94%) ಹೆಚ್ಚಿನ ದರ (L3) ನಮೂದಿಸಿರುತ್ತಾರೆ. ಈ ಮೂವರಲ್ಲಿ ಕಡಿಮೆ ದರ ನಮೂದಿಸಿದವರಿಗೆ ಆದ್ಯತೆ ನೀಡಬೇಕಾಗಿದ್ದರೂ, L1 ಮತ್ತು L2 ಗುತ್ತಿಗೆದಾರರ ಬಗ್ಗೆ ಸ್ಥಳೀಯ ವಿಚಾರಣೆ ಮಾಡಿ ಇವರುಗಳು ನಿರ್ವಹಿಸಿರುವ ಕಾಮಗಾರಿಗಳ ಬಗ್ಗೆ ಸಮಾಧಾನಕರ ಮಾಹಿತಿ ಲಭ್ಯವಿಲ್ಲದೇ ಇರುವುದರಿಂದ, ಇವರ ಗುತ್ತಿಗೆ ಪ್ರಸ್ತಾವನೆಯನ್ನು ತಿರಸ್ಕರಿಸಿ, ಆಪಾದಿತ ಅಧಿಕಾರಿಯು ಶೇಕಡ 10.94 ರಷ್ಟು ಹೆಚ್ಚಿನ ದರ ನಮೂದಿಸಿದ ಗುತ್ತಿಗೆದಾರರ (L3) ಗುತ್ತಿಗೆಯನ್ನು ಅಂಗೀಕರಿಸಿರುತ್ತಾರೆ. L1 ಮತ್ತು L2 ರವರುಗಳು ನಿರ್ವಹಿಸಿರುವ ಕಳಪೆ ಕಾಮಗಾರಿಗಳ ಬಗ್ಗೆ ಯಾವುದೇ ದಾಖಲೆ/ಪುರಾವೆಗಳ ಸಾಕ್ಷ್ಯ ಇರುವುದಿಲ್ಲವಾದರೂ ಇವರುಗಳು ನಮೂದಿಸಿದ ಕಡಿಮೆ ದರಗಳು ಅವಾಸ್ತವ ಹಾಗೂ ಸುಳ್ಳು ಸೃಷ್ಟಿಗಳಾಗಿರುತ್ತವೆ ಎಂದು ಯಾವುದೇ ಆಧಾರವಿಲ್ಲದೆ ಇವರ ಗುತ್ತಿಗೆ ಪ್ರಸ್ತಾವನೆಯನ್ನು ರದ್ದುಪಡಿಸಿರುತ್ತಾರೆ ಮತ್ತು ಗುತ್ತಿಗೆ ಷೆಡ್ಯೂಲ್‌ನ 5 ಷರತ್ತುಗಳನ್ನು ಇವರುಗಳು ಪೂರೈಸಿದ್ದರೂ ಸಹ ಪೂರೈಸಿಲ್ಲ ಎಂಬ ಕಾರಣ ನೀಡಿ, ಗುತ್ತಿಗೆ ಷೆಡ್ಯೂಲ್ ನಂ. 14ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ L1 ಮತ್ತು L2 ಗುತ್ತಿಗೆ ಪ್ರಸ್ತಾವನೆಯನ್ನು ತಿರಸ್ಕರಿಸಿರುವುದು ನಿಯಮಗಳ ಉಲ್ಲಂಘನೆಯಾಗಿದ್ದು, ಕರ್ತವ್ಯಲೋಪ ಎಸಗಿರುವುದು ಸ್ಪಷ್ಟವಾಗಿರುತ್ತದೆ. ಅದಕಾರಣ ಇವರ ವಿರುದ್ಧದ ಆರೋಪಗಳು ಸಾಬೀತಾಗಿರುವುದಾಗಿ ವರದಿ ನೀಡಿರುತ್ತಾರೆ.

ವಿಚಾರಣಾ ವರದಿಯನ್ನು ಪರಿಶೀಲಿಸಿ, ಸರ್ಕಾರವು ಅಂಗೀಕರಿಸುತ್ತಾ, ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ನೀಡಲಾಗಿದ್ದ 2ನೇ ಕಾರಣ ಕೇಳುವ ನೋಟೀಸಿಗೆ ಶ್ರೀ ಬಿ.ಹೆಚ್. ಸಿದ್ದಪ್ಪ ರವರು ಸಲ್ಲಿಸಿದ ಲಿಖಿತ ಅಹವಾಲು ಯಾವುದೇ ಸಮರ್ಥನೆಯಿಂದ ಕೂಡಿರುವುದಿಲ್ಲವೆಂದು ಪರಿಗಣಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 252 ಕೆಇವಿ 07, ಬೆಂಗಳೂರು, ದಿನಾಂಕ: 4ನೇ ಡಿಸೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 8 (iii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ. ಬಿ.ಹೆಚ್. ಸಿದ್ದಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಹಿಂದಿನ ಉಪವಿಭಾಗಾಧಿಕಾರಿ, ಹಾವೇರಿ ಉಪ ವಿಭಾಗ, ಹಾವೇರಿ ಹಾಗೂ ಆಡಳಿತಾಧಿಕಾರಿ, ನಗರ ಯೋಜನಾ ಪ್ರಾಧಿಕಾರ, ರಾಣೆಬೆನ್ನೂರು (ಹಾಲಿ ಉಪ ವಿಭಾಗಾಧಿಕಾರಿ, ಬೆಂಗಳೂರು ದಕ್ಷಿಣ ವಿಭಾಗ, ಬೆಂಗಳೂರು ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ) ಇವರಿಗೆ ಮುಂದಿನ ನಾಲ್ಕು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮದೊಂದಿಗೆ (With Cumulative effect) ತಡೆಹಿಡಿಯುವ ದಂಡನೆ ವಿಧಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2835

**ಹೆಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ವಿ.ಪಿ ಕೆದಿಲಾಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು– ಇವರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವ ಧನ ಹಾಗೂ ಪ್ರಯಾಣ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) ದಿನಾಂಕ: 21–07–07ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 046 ಎಸ್‌ಇಎಫ್ 07

2) ವಿಚಾರಣಾಧಿಕಾರಿಯವರ ವರದಿ ದಿನಾಂಕ: 22–09–09

3) ವಿಚಾರಣಾಧಿಕಾರಿಯವರ ಮನವಿ ದಿನಾಂಕ: 22–09–09

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಶ್ರೀ ವಿ.ವಿ ಪುಣೇದ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಇವರು ಈ ಹಿಂದೆ ಕಾರ್ಯನಿರ್ವಾಹಕ ಅಧಿಕಾರಿ, ಔರಾದ್ ತಾಲ್ಲೂಕು, ಔರಾದ್ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ರಜೆ ಮುಗಿದ ನಂತರವೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ, ರಜೆ ಮಂಜೂರಾತಿ ಪಡೆಯದೇ ರಜೆಯ ಮೇಲೆ ತೆರಳಿರುವುದು, ಪೂರ್ವಾನುಮತಿ ಪಡೆಯದೇ ಕೇಂದ್ರ ಸ್ಥಾನ ಬಿಡುವುದು, ಕೇಂದ್ರ ಸ್ಥಾನದಲ್ಲಿ ವಾಸ್ತವ್ಯ ಇಲ್ಲದಿರುವುದು, ತಾಲ್ಲೂಕು ಪಂಚಾಯತ್ ಸ್ಥಾಯಿ ಸಮಿತಿ ರಚನೆ ನಿರ್ಣಯವನ್ನು ಕಾನೂನು ಬಾಹಿರವಾಗಿ ಕೈಗೊಂಡು ನಡವಳಿಗೆ ಸಹಿ ಮಾಡಿರುವುದು, ಚಿಕ್‌ನ್‌ಗುನ್ಯಾ ರೋಗದ ನಿಯಂತ್ರಣದ ನೋಡಲ್ ಅಧಿಕಾರಿಯವರು ಭೇಟಿ ನೀಡಿದ ಸಮಯದಲ್ಲಿ ಗೈರುಹಾಜರಾಗಿರುವುದು ಮೇಲಾಧಿಕಾರಿಗಳ ಅನುಮತಿ ಪಡೆಯದೆ ಸಚಿವರ ಸಭೆಯಲ್ಲಿ ಹಾಜರಾಗಿರುವುದು ಇತ್ಯಾದಿಗಳ ಮೂಲಕ ಅಧಿಕಾರ ದುರುಪಯೋಗ ಮತ್ತು ದುರ್ನಡತೆ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆಯ ಮೂಲಕ ತಿಳಿಯುವ ಸಲುವಾಗಿ, ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮವಳಿ, 1957ರ ನಿಯಮ 11 (2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಆರೋಪದ ಬಗ್ಗೆ ವಿಚಾರಣೆ ನಡೆಸಿ ವರದಿ ಸಲ್ಲಿಸಲು ಶ್ರೀ ವಿ.ಪಿ. ಕೆದಿಲಾಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಬೆಂಗಳೂರು ಇವರನ್ನು ವಿಚಾರಣಾಕಾರಿಯನ್ನಾಗಿ ಸರ್ಕಾರವು ನೇಮಿಸಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿನ ಮನವಿಯಲ್ಲಿ ವಿಚಾರಣಾಧಿಕಾರಿಗಳು ಗೌರವ ಧನ ಹಾಗೂ ಪ್ರಯಾಣ ಭತ್ಯೆ ಮಂಜೂರು ಮಾಡುವಂತೆ ಕೋರಿರುತ್ತಾರೆ. ಈ ಸಂಬಂಧ ಇವರಿಗೆ ಗೌರವ ಧನ ಹಾಗೂ ಪ್ರಯಾಣ ಭತ್ಯೆ ಮಂಜೂರು ಮಾಡಬೇಕಾಗಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 081 ಕೆಇವಿ 07, ಬೆಂಗಳೂರು, ದಿನಾಂಕ: 4ನೇ ಡಿಸೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಶ್ರೀ ವಿ.ಪಿ ಕೆದಿಲಾಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರು ಇಲಾಖಾ ವಿಚಾರಣೆ ನಡೆಸಿ ಸಲ್ಲಿಸಿದ ವಿಚಾರಣಾ ವರದಿಯನ್ನು ಸರ್ಕಾರವು ಅಂಗೀಕರಿಸಿದೆ ಹಾಗೂ ಇದನ್ನು ಸಲ್ಲಿಸಿದ್ದಕ್ಕಾಗಿ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 016 ಸೇಇವಿ 05, ದಿನಾಂಕ: 23–08–05ರನ್ವಯ ರೂ. 6000–00 (ಆರು ಸಾವಿರ ರೂಪಾಯಿಗಳು ಮಾತ್ರ) ಗೌರವಧನವನ್ನು ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಆಸುಇ 045 ಸೇಇವಿ 01, ದಿನಾಂಕ: 04–03–02ರನ್ವಯ ರೂ. 1000–00 (ಒಂದು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಪ್ರಯಾಣ ಭತ್ಯೆಯನ್ನು ಶ್ರೀ ಕೆದಿಲಾಯ ರವರಿಗೆ ಪಾವತಿಸಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಆಯವ್ಯಯ ಲೆಕ್ಕಶೀರ್ಷಿಕೆ "2052–ಸಚಿವಾಲಯ–ಸಾಮಾನ್ಯ ಸೇವೆಗಳು–090–ಸಚಿವಾಲಯ–01, ಕರ್ನಾಟಕ ಸರ್ಕಾರ ಸಚಿವಾಲಯ–051–ಸಾಮಾನ್ಯ ವೆಚ್ಚಗಳು"ರಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಆರ್. ನಾಗೇಂದ್ರ**

ಪಿ.ಆರ್. 2836

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ವಿಷಯ:** ಶ್ರೀ ಡಿ.ಬಿ ನಾಯಕ್, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ ಹಿಂದಿನ ಆಯುಕ್ತರು ಬೆಳಗಾಂ ನಗರಾಭಿವೃದ್ಧಿ ಪ್ರಾಧಿಕಾರ, ಹಾಲಿ ಅಪರ ಆಯುಕ್ತರು, ಪ್ರಾದೇಶಿಕ ಆಯುಕ್ತರ ಕಛೇರಿ ಗುಲ್ಬರ್ಗಾ ಇವರ ವಿರುದ್ಧ ಇಲಾಖಾ ವಿಚಾರಣೆ–ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1) ನೋಟೀಸ್ ನಂ:ಸಿಆಸುಇ 113 ಕೆಇವಿ 07 ದಿ: 17–07–2009

2) ಶ್ರೀ ಡಿ.ಬಿ ನಾಯಕ್, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ ಹಿಂದಿನ ಆಯುಕ್ತರು ಬೆಳಗಾಂ ನಗರಾಭಿವೃದ್ಧಿ ಪ್ರಾಧಿಕಾರ, ಇವರ ದಿ: 02–09–09ರ ಉತ್ತರ

**ಪ್ರಸ್ತಾವನೆ:**

ಶ್ರೀ ಡಿ.ಬಿ ನಾಯಕ್, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ ರವರು ಬೆಳಗಾಂ ನಗರಾಭಿವೃದ್ಧಿ ಪ್ರಾಧಿಕಾರ, ಆಯುಕ್ತರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಜೇಷ್ಟತೆಯನ್ನು ಅನುಸರಿಸದೇ ನಿರಾಕ್ಷೇಪಣಾ ಪತ್ರವನ್ನು ನೀಡಿರುವ, ನಿವೇಶನ ಹಂಚಿಕೆದಾರರಿಗೆ ಖರೀದಿ ಪತ್ರ ನೀಡುವಲ್ಲಿ ವಿಳಂಬ ಮಾಡಿರುವ, ನಗರ ಯೋಜನಾ ಸದಸ್ಯರ ತಾಂತ್ರಿಕ ಅಭಿಪ್ರಾಯ ಧಿಕ್ಕರಿಸಿ ಉಪ ವಿಭಜನೆ ಪ್ರಕರಣಗಳನ್ನು ತಿರಸ್ಕರಿಸಿರುವ ಕಟ್ಟಡ ಮುಕ್ತಾಯ ಪ್ರಮಾಣ ಪತ್ರ ನೀಡುವ ಸಂಕಲನ ನಿರ್ವಹಿಸದೇ ಪ್ರಕರಣಗಳನ್ನು ಇತ್ಯರ್ಥಪಡಿಸಿ ವಿಳಂಬ ಎಸಗಿರುವ ಬಿನ್ ಶೇಲ್ಕೆ ಆದೇಶ ನಿರ್ಬಂಧನೆ ಉಲ್ಲಂಘಿಸಿ ತುಂಡುತುಂಡಾಗಿ ಏಕ ನಿವೇಶನಕ್ಕೆ ಅನುಮೋದನೆ ನೀಡಿರುವ ಇತ್ಯಾದಿ ಆರೋಪಗಳ ಕುರಿತು ಎಸಗಿರುವ ಕರ್ತವ್ಯ ಲೋಪ ಹಾಗೂ ದುರ್ನಡತೆಗೆ ಸಂಬಂಧಿಸಿದಂತೆ ಅವರಿಗೆ ಮೇಲೆ (1)ರಲ್ಲಿ ಓದಲಾದ ದಿ: 17–07–09ರಲ್ಲಿ ನೋಟೀಸನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮವಳಿ, 1957ರ ನಿಯಮ 11 ಮತ್ತು 11–ಎ ರನ್ವಯ ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು. ನೋಟೀಸಿಗೆ ಸದರಿ ಅಧಿಕಾರಿಯು ಮೇಲೆ (2)ರಲ್ಲಿ ಓದಲಾದ ದಿ: 02–09–2009ರಲ್ಲಿ ಉತ್ತರ ಸಲ್ಲಿಸಿ ತಮ್ಮ ಮೇಲೆ ಹೊರಿಸಲಾದ ಆರೊಪಗಳನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಅವರ ಮೇಲೆ ಹೊರಿಸಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ನಡೆಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 113 ಕೆಇವಿ 2007, ಬೆಂಗಳೂರು, ದಿನಾಂಕ: 8ನೇ ಡಿಸೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮವಳಿ, 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಡಿ.ಬಿ ನಾಯಕ್, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ ಹಿಂದಿನ ಆಯುಕ್ತರು ನಗರಾಭಿವೃದ್ಧಿ ಪ್ರಾಧಿಕಾರ, ಬೆಳಗಾಂ ಹಾಲಿ ಅಪರ ಆಯುಕ್ತರು, ಪ್ರಾದೇಶಿಕ ಆಯುಕ್ತರ ಕಛೇರಿ ಗುಲ್ಬರ್ಗಾ ರವರು ಇವರ ವಿರುದ್ಧ ಮಾಡಲಾದ ಆರೋಪಗಳ ಕುರಿತು ವಿಚರಣೆ ನಡೆಸಲು ಶ್ರೀ ಪ್ರಭಾಕರ್ ಗಣಪತಿ ಕುಲಕರ್ಣಿ ನಿವೃತ್ತ ನ್ಯಾಯಾಧೀಶರು ಬೆಳಗಾಂ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂ:ಸಿಆಸುಇ 22 ಸೇಇವಿ 2007 ದಿ:11.04.2008ರಂತೆ ರೂ: 8000/–ಗಳ ಗೌರವಧನ ಹಾಗೂ ರೂ. 1500/– ವಾಹನ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.

ಶಿಸ್ತು ಪ್ರಾಧಿಕಾರಿಯು ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಾರ್ಯದರ್ಶಿ, ಬೆಳಗಾಂ ನಗರಾಭಿವೃದ್ಧಿ ಪ್ರಾಧಿಕಾರ ಬೆಳಗಾಂ ರವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ, ಲೇಖನ ಸಾಮಗ್ರಿಗಳು ಇತ್ಯಾದಿಗಳನ್ನು ಒದಗಿಸಲು ಜಿಲ್ಲಾಧಿಕಾರಿಗಳು, ಬೆಳಗಾಂ ರವರು ಕ್ರಮ ಕೈಗೊಳ್ಳುತ್ತಾರೆ. ವಿಚಾರಣೆಯನ್ನು ಅತಿ ಶೀಘ್ರವಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಆರ್. ನಾಗೇಂದ್ರ**

ಪಿ.ಆರ್. 2837

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**INFRASTRUCTURE DEVELPOPMENT SECRETARIAT**

**Sub:** Conference on Opportunities in Industrial Corridor Infrastructure in Karnataka From 18 December 2009: Hotel LaL Lt Ashok : Bangalore.

**Read:** Letter No. Nil dated 9th November 2009 from the Chairman, Confederation of Indian industry (SR).

**Preamble:**

Chairman, Confederation of Indian Industry (CII) Vide, his letter referred to above, has stated that Confederation of Indian Industry (SR) is organizing the **"Conference on Opportunities in Industrial Corridor Infrastructure in Karnataka from 18 December 2009 at Hotel LaL lt Ashok: Bangaalore"**

2. it is stated that the Conference will be a good platform to engage the stakeholders to meet and talk on the investments prospects and showcase infrastructure projects. The Conference would focus on:

- Core Infrastructure – Roads, Power, Water
- Mega Infrastructure – Ports & Airports
- Industrial Infrastructure
- Social Infrastructure
- Emerging Infrastructure Opportunities
- Sectors targeted for FDI
- Policy framework to attract investments

3. The Proposal of the Chairman, Confederation of India Indutry has been examined and Since this is an important event to market the various feasibility reposrts in Infrastructure it is decided to support & sponsor the programme.

4. Hence this order.

**Government Order No. IDD 120 IDM 2009, Bangalore, Dated: 14th December 2009**

Government is pleased to extend its support and sanction an amount of Rs. 5.00 lakhs (Rupees Five Lakhs Only) for the above said ""Conference Opportunities in Industrial Corridor Infrastructure in Karnataka being held from 18 December 2009 at Bangalore"

2. The above expenditure is to be met under the Head of Account "3451-00-090-1-06-059-Infrastructure preliminary Studies-other Expenditure (Plan)"

3. The Managing Director, iDeCk, would draw this amount on a payee's receipt duly countersigned by the Under Secretary to Govt. Infrastructure Development Department and to make suitable arrangements for its onward payment to CII, Bangalore.

4. this order is issued in accordance with the Financial powers delegated to Principal Secretaries/Secretaries vide G.O. No. FD 1 TFP 2008 dated 16-5-2008.

By Order and in the name of the Governor of Karnataka

**N. MANJULA GEETHA**

P.R. 2838

Under Secreatry to Government,

Infrastructure Development Department

**ಕಂದಾಯ ಸಚಿವಾಲಯ**

**ವಿಷಯ:** ಕಿತ್ತೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡುವ ಬಗ್ಗೆ.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 115 ಆರ್‌ಇಹೆಚ್ 2007 ದಿನಾಂಕ: 13–1–2009.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 13–1–2009ರ ಸರ್ಕಾರಿ ಆದೇಶದಲ್ಲಿ ಕಿತ್ತೂರು ಅಭಿವೃದ್ಧಿ ಪ್ರಾಧಿಕಾರವನ್ನು ಕಾರ್ಯದೇಶ ಹೊರಡಿಸುವ ಮೂಲಕ ರಚಿಸಲಾಗಿದೆ. ಈ ಪ್ರಾಧಿಕಾರಕ್ಕೆ ಶಾಸನಬದ್ಧ ಚೌಕಟ್ಟುಗಳನ್ನು ನಿಗಧಿಪಡಿಸಿ, ಕಾಯ್ದೆ ರಚಿಸಲು ಪ್ರತ್ಯೇಕವಾಗಿ ಪರಿಶೀಲಿಸಿ ಕ್ರಮ ಕೈಗೊಳ್ಳಲಾಗುತ್ತಿದೆ. ಕಿತ್ತೂರು ಅಭಿವೃದ್ಧಿ ಪ್ರಾಧಿಕಾರವನ್ನು ರಾಜ್ಯ ಸರ್ಕಾರದಿಂದ ಮೂವರು ಅಧಿಕಾರೇತರ ಸದಸ್ಯರನ್ನು ನಾಮನಿರ್ದೇಶನ ಮಾಡಲು ಹಾಗೂ ಐದು ಜನ ತಜ್ಞರನ್ನು ಸರ್ಕಾರದಿಂದ ನೇಮಕ ಮಾಡಲು ಅವಕಾಶ ಕಲ್ಪಿಸಲಾಗಿದೆ. ಈ ಹಿನ್ನೆಲೆಯಲ್ಲಿ ಕಿತ್ತೂರು ಅಭಿವೃದ್ಧಿ ಪ್ರಾಧಿಕಾರದಲ್ಲಿ ಹಾಲಿ ಖಾಲಿಯಿರುವ ಅಧಿಕಾರೇತರ ಸದಸ್ಯರ ಸ್ಥಾನಗಳಿಗೆ ಸರ್ಕಾರದಿಂದ ನಾಮನಿರ್ದೇಶನ ಮಾಡಲು ತೀರ್ಮಾನಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 151 ಆರ್‌ಇಹೆಚ್ 2009, ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2009**

ಸರ್ಕಾರವು ಕಿತ್ತೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಈ ಕೆಳಕಂಡವರನ್ನು ಸದಸ್ಯರುಗಳನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿ ಆದೇಶಿಸಿದೆ.

**I. ಕಿತ್ತೂರು ಇತಿಹಾಸ ಹಾಗೂ ಪರಂಪರೆಯಲ್ಲಿ ಅನುಭವ ಹೊಂದಿರುವ ತಜ್ಞರು 5**

**ಶ್ರೀ/ಶ್ರೀಮತಿ**

| | | |
|---|---|---|
| 1 | ಚನ್ನಪ್ಪ ಗುರುಪ್ಪ ಮರಿಹಾಳ, ಅಂಚೆ ವಸತಿ/ಕಿತ್ತೂರು, ಬೈಲಹೊಂಗಲ ತಾಲ್ಲೂಕು | ಸದಸ್ಯರು |

| | | |
|---|---|---|
| 2 | ಉಮೇಶ ಮುರಗಯ್ಯ ಹಿರೇಮಠ, ಅಂಚೆ ವಸತಿ: ಕಿತ್ತೂರು, ಬೈಲಹೊಂಗಲ ತಾಲ್ಲೂಕು | ಸದಸ್ಯರು |
| 3 | ಅನುಪಗೋಪಾಲರಾವ್ ದೇಶಪಾಂಡೆ, ಅಂಚೆ ವಸತಿ: ಕಿತ್ತೂರು, ಬೈಲಹೊಂಗಲ ತಾಲ್ಲೂಕು | ಸದಸ್ಯರು |
| 4 | ಬಸವರಾಜ ಚಂದ್ರಶೇಖರ ಕುಪ್ಪನಗೌಡ್ರ ಅಂಚೆ ವಸತಿ: ಕಿತ್ತೂರು, ಬೈಲಹೊಂಗಲ ತಾಲ್ಲೂಕು | ಸದಸ್ಯರು |
| 5 | ಮಡಿವಾಳಪ್ಪ ಬಸವಣ್ಣಪ್ಪ ವರಗನ್ನವರ, ಅಂಚೆ ವಸತಿ: ಕಿತ್ತೂರು, ಬೈಲಹೊಂಗಲ ತಾಲ್ಲೂಕು | ಸದಸ್ಯರು |

**II. ಅಧಿಕಾರೇತರ ಸದಸ್ಯರು –3**

**ಶ್ರೀ/ಶ್ರೀಮತಿ**

| | | |
|---|---|---|
| 1 | ಚನ್ನಬಸಪ್ಪ ಶಿವಲಿಂಗಪ್ಪ ಮೊಕಾಶಿ, ಅಂಚೆ ವಸತಿ: ಕಿತ್ತೂರು, ಬೈಲಹೊಂಗಲ ತಾಲ್ಲೂಕು | ಸದಸ್ಯರು |
| 2 | ಬಾಪುಗೌಡ ಚಿಂತಮಣಿಗೌಡ ಪಾಟೀಲ, ಅಂಚೆ ವಸತಿ: ತುರಮರಿ, ಬೈಲಹೊಂಗಲ ತಾಲ್ಲೂಕು | ಸದಸ್ಯರು |
| 3 | ಶಿವಾನಂದ ಬಸವಣ್ಣೆಪ್ಪಾ ಜಕಾತಿ, ಅಂಚೆ ವಸತಿ: ಕಿತ್ತೂರು, ಬೈಲಹೊಂಗಲ ತಾಲ್ಲೂಕು | ಸದಸ್ಯರು |

ಈ ನಾಮನಿರ್ದೇಶಿತ ಸದಸ್ಯರು ನಿಯಮಾನುಸಾರ ಲಭ್ಯವಾಗುವ ಭತ್ಯೆಗಳನ್ನು ಪಡೆಯುವರು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವೆಂಕಟೇಶಮೂರ್ತಿ**

ಪಿ.ಆರ್. 2840 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸ್ವಾ–2 ಮತ್ತು ಪುನರ್ವಸತಿ)

**REVENUE SECRETARIAT**

**Sub:** Organisation of Census of India 2001- Constitution State of Level Census Co-Ordination Committee – reg.

**Read:** 1) G.O. No RD 102 ETC 2009, Bangalore dated 31st Cotober 2009,

2) DO. Letter No. CEN/7/ORG/2009 dated 04-12-2009 of the Director of Census Operations, Karnataka Ministry of Home Afairs, Govt. of India, Bangaloore.

**Preamble:**

In the government Order read at 1 above a State Level Census Co-Ordination Committee was Constituted with Chief Secretary to Government of Karnataka as the Chairperson with 12 other members. The Director of Census Operations, Karnataka has in his letter read at 2 above, proposed to include all the Regional Commissioners in the Committee as they could be also be very useful since, they would be touring in their Jurisdiction frequently and they may be able to effectively monitor and supervise the preparatory work of the ensuing 2011 Census Operations and also the field operations in their Jurisdiction, Further, he proposes to include the Special Commissioner, Bruhat Bangalore Mahanagara Palike, Bangalore as member in the committee as this will help to effectively monitor and supervise the preparatory work and field operations of Census in Bruhat Bangalore Mahanagara Palike area.

**Government Order No. RD 102 ETC 2009, Bangalore, Dated: 14th December 2009**

Government is pleased to include the Regional Commissioners, Bangalore Division Mysore Division, Gulbarga Division and Belgaum Division and also the Special Commissioner, BBMP as members in the State Level Census Co-ordination Committee in Connection with the work of Census of India, 2011, with immediate effect.

By Order and in the name of the Governor of Karnataka

**RAMACHANDRAIAH**

P.R. 2842 Under Secreatry to Government, Revenue Department (DM & Ser-2)

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಕೆ.ವಿ. ನಾಗರಾಜ್, ಪುರಸಭಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗ ಇವರಿಗೆ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1) ಶ್ರೀ ಕೆ.ವಿ. ನಾಗರಾಜ್, ಪುರಸಭಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗ ಇವರ ಮನವಿ ದಿನಾಂಕ: 2–3–2009.

2) ಜಿಲ್ಲಾಧಿಕಾರಿಗಳು ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ಪತ್ರ ಸಂಖ್ಯೆ: ಇಎಸ್‌ಟಿ(1) ಸಿಆರ್ – 541/2008–09 ದಿನಾಂಕ: 26–10–2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ದಿನಾಂಕ: 2–3–2009 ರ ಮನವಿಯಲ್ಲಿ ಶ್ರೀ ಕೆ.ವಿ. ನಾಗರಾಜ್, ಪುರಸಭಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗ ಇವರು ಅನಾರೋಗ್ಯದ ನಿಮಿತ್ತ ಬಳಲುತ್ತಿರುವುದರಿಂದ, ಧೀರ್ಘಕಾಲದ ಚಿಕಿತ್ಸೆ ಮತ್ತು ವಿಶ್ರಾಂತಿ ಅಗತ್ಯ ಇರುತ್ತದೆ ಎಂದು ಹಾಗೂ ಕೌಟುಂಬಿಕ ಕಾರಣಗಳಿಂದ ತಮಗೆ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 285 ಪ್ರಕಾರ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡುವಂತೆ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ದಿನಾಂಕ: 26–10–2009ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರು ಶ್ರೀ ಕೆ.ವಿ. ನಾಗರಾಜ್, ಪುರಸಭಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗ ಇವರ ಸ್ವಯಂ ನಿವೃತ್ತಿ ಕುರಿತಂತೆ ಅವರು ತಮ್ಮ ಸೇವಾ ಅವಧಿಯಲ್ಲಿ ಸೇವೆ ಸಲ್ಲಿಸಿದ ಎಲ್ಲಾ ಕಾರ್ಯಾಲಯಗಳಿಂದ ಬೇಬಾಕಿ ಪತ್ರಗಳನ್ನು ಪಡೆದು, ಅವುಗಳ ಪರಿಶೀಲನೆಯಿಂದ ಶ್ರೀಯುತರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಆಗಲೀ ಮತ್ತು ಹೂಡುವ ಸಂಭವ ಇಲ್ಲವೆಂದು ದೃಢಪಟ್ಟಿರುತ್ತದೆ. ಎಂದು ಹಾಗೂ ಸದರಿಯವರಿಂದ ಸರ್ಕಾರಕ್ಕೆ ಸಂದಾಯವಾಗ ತಕ್ಕ ಯಾವುದೇ ಆರ್ಥಿಕ ಬಾಕಿ ಇರುವುದಿಲ್ಲವೆಂದು ತಿಳಿಸುತ್ತಾ, ಶ್ರೀ ಕೆ.ವಿ. ನಾಗರಾಜ್ ಇವರ ಕೋರಿಕೆಯಂತೆ ಸರ್ಕಾರಿ ಸೇವೆಯಿಂದ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡಬಹುದೆಂದು ವರದಿಯಲ್ಲಿ ತಿಳಿಸಿರುತ್ತಾರೆ. ಅದರಂತೆ ಸರ್ಕಾರವು ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿ, ಶ್ರೀ ಕೆ.ವಿ. ನಾಗರಾಜ್, ಪುರಸಭಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗ ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲವೆಂದು ಹಾಗೂ ಹೂಡಲು ಉದ್ದೇಶಿಸಿಲ್ಲವೆಂದು ಮತ್ತು ಶ್ರೀಯುತರಿಂದ ಸರ್ಕಾರಕ್ಕೆ ಯಾವುದೇ ಬಾಕಿ ಬರಬೇಕಾಗಿಲ್ಲವೆಂದು ದೃಢೀಕರಿಸಿಕೊಂಡು ಶ್ರೀಯುತರಿಗೆ ದಿನಾಂಕ: 31.12.2009 ರಂದು ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 285(1)(ಎ) ಪ್ರಕಾರ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡಲು ಸರ್ಕಾರವು ನಿರ್ಧರಿಸಿದೆ. ಅದರಂತೆ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 237 ಎಎಸ್‌ಡಿ 2009, ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಕೆ.ವಿ. ನಾಗರಾಜ್, ಪುರಸಭಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗ (ತಹಶೀಲ್ದಾರ್ ಗ್ರೇಡ್–1) ಇವರ ಕೋರಿಕೆಯಂತೆ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 285(1)(ಎ) ಪ್ರಕಾರ ದಿನಾಂಕ: 31–12–2009 ಅಪರಾಹ್ನದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಸ್ವ–ಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2843

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ, (ಸೇವೆಗಳು–3)

**ಅಧಿಸೂಚನೆ**

**ಸಂಖ್ಯೆ: ಆರ್‌ಡಿ 603 ಆರ್‌ಎಂಇ 2009, ಬೆಂಗಳೂರು, ದಿನಾಂಕ: 3ನೇ ಡಿಸೆಂಬರ್ 2009**

ಸಹಕಾರ ಇಲಾಖೆಯು ದಿನಾಂಕ: 23–11–2009ರಂದು ಹೊರಡಿಸಲಾದ ಅಧಿಸೂಚನೆ ಸಂ: ಸಇ 221 ಎಸಸೇ 2009 ರನ್ವಯ ಶ್ರೀ ಕೆ.ಹೆಚ್. ತಿಮ್ಮಯ್ಯ, ಸಮಾಪನಾಧಿಕಾರಿ ಸಿಂಪ್ಸನ್ ಅಂಡ್ ಗ್ರೂಪ್ಸ್ ಆಫ್ ಕಂಪನೀಸ್, ಸಹಕಾರ ಸಂಘಗಳು, (ಕಲ್ಪತರು ಸೂಪರ್ ಬಜಾರ್), ಬೆಂಗಳೂರು ಇವರನ್ನು ಕರ್ನಾಟಕ ಮೇಲ್ಮನವಿ ನ್ಯಾಯಾಧೀಕರಣ, ಬೆಂಗಳೂರು ಇಲ್ಲಿ ಶ್ರೀ ಮಹಮ್ಮದ್ ರಹಮತ್ ಉಲ್ಲಾ, ಸಹಕಾರ ಸದಸ್ಯರು, ಕರ್ನಾಟಕ ಮೇಲ್ಮನವಿ ನ್ಯಾಯಾಧೀಕರಣ ಇವರ ವರ್ಗಾವಣೆಯಿಂದ ತೆರವಾದ ಜಾಗಕ್ಕೆ ಸಹಕಾರ ಸದಸ್ಯರನ್ನಾಗಿ ನೇಮಿಸುವ ಸಲುವಾಗಿ ಶ್ರೀಯುತರು ಸೇವೆಯನ್ನು ಕಂದಾಯ ಇಲಾಖೆಯ ವಶಕ್ಕೆ ನೀಡಲಾಗಿದೆ.

ಆದ್ದರಿಂದ ಶ್ರೀ. ಕೆ.ಹೆಚ್. ತಿಮ್ಮಯ್ಯ, ಸಮಾಪನಾಧಿಕಾರಿ ಸಿಂಪ್ಸನ್ ಅಂಡ್ ಗ್ರೂಪ್ಸ್ ಆಫ್ ಕಂಪನೀಸ್, ಸಹಕಾರ ಸಂಘಗಳು, (ಕಲ್ಪತರು ಸೂಪರ್ ಬಜಾರ್), ಬೆಂಗಳೂರು ಇವರು ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕರ್ನಾಟಕ ಮೇಲ್ಮನವಿ ನ್ಯಾಯಾಧೀಕರಣ ಬೆಂಗಳೂರು ಇಲ್ಲಿ ಶ್ರೀ ಮಹಮ್ಮದ್ ರಹಮತ್ ಉಲ್ಲಾ, ಸಹಕಾರ

ಸದಸ್ಯರು, ಕರ್ನಾಟಕ ಮೇಲ್ಮನವಿ ನ್ಯಾಯಾಧೀಕರಣ ಇವರ ವರ್ಗಾವಣೆಯಿಂದ ತೆರವಾದ ಹುದ್ದೆಯಲ್ಲಿ ಸಹಕಾರ ಸದಸ್ಯರನ್ನಾಗಿ ಮರು ನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2844 **ಟಿ. ಗಂಗಾಧರ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ, (ಕೆಎಟಿ ಮತ್ತು ಬಾನಿ)

**ತಿದ್ದುಪಡಿ**

**ಸಂ. ಕಂಇ/132/ಎಂವಿಎಸ್ 2009, ಬೆಂಗಳೂರು, ದಿನಾಂಕ: 8ನೇ ಡಿಸೆಂಬರ್ 2009**

ಸರ್ಕಾರದ ಆದೇಶ ಸಂ.ಕಂಇ 295 ಎಂವಿಎಸ್ 2006, ದಿನಾಂಕ: 18–02–2009ರ ಆದೇಶ ಭಾಗದಲ್ಲಿ ಈ ವೆಚ್ಚವನ್ನು ಲೆಕ್ಕಶೀರ್ಷಿಕೆ **"2029–00–101–1–01–015 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು"** ಎಂಬುದರ ಬದಲಾಗಿ **"ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2071–01–200–01–06 ರಡಿಯಲ್ಲಿ ಭರಿಸತಕ್ಕದ್ದು"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2845 **ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ, (ಸೇವೆಗಳು–ಎ)

**ಉನ್ನತ ಶಿಕ್ಷಣ ಸಚಿವಾಲಯ**

**ವಿಷಯ:** ಆರ್.ಐ.ಡಿ.ಎಫ್–15 ಯೋಜನೆಯಡಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಿಗೆ ತರಗತಿ ಕೊಠಡಿಗಳನ್ನು ನಿರ್ಮಾಣ ಮಾಡುವ ಬಗ್ಗೆ.

**ಓದಲಾಗಿದೆ:** 1) ಪ್ರಬಂಧಕರು, ನಬಾರ್ಡ್ ಸಂಸ್ಥೆ, ಬೆಂಗಳೂರುರವರ ಪತ್ರ ಸಂಖ್ಯೆ: ಎನ್.ಬಿ.ಎಸ್.ಪಿಡಿ/1413/ ಆರ್.ಐ.ಡಿ.ಎಫ್–15 (ಕರ್ನಾಟಕ ಆರ್ಓ)105 ಪಿಎಸ್‌ಸಿ/2009–10 ದಿನಾಂಕ: 30–10–2009

2) ಆಯಕ್ತರು ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಾಶಿಇ 24 ಯೋಜನೆ 2009–10 ದಿನಾಂಕ: 10–09–2009

**ಪ್ರಸ್ತಾವನೆ:**

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖ(1)ರಲ್ಲಿ ಓದಲಾದ ಪತ್ರದಲ್ಲಿ ನಬಾರ್ಡ್ ಸಂಸ್ಥೆಯ ಪ್ರಬಂಧಕರು ಆರ್.ಐ.ಡಿ.ಎಫ್–15 ಯೋಜನೆಯಡಿಯಲ್ಲಿ ರಾಜ್ಯದ ಅಗತ್ಯವಿರುವ 27 ಸ್ಥಳಗಳಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಿಗೆ ಒಟ್ಟು ರೂ. 3267.00 ಲಕ್ಷಗಳ ವೆಚ್ಚದಲ್ಲಿ ತರಗತಿ ಕೊಠಡಿಗಳನ್ನು ನಿರ್ಮಾಣ ಮಾಡಲು ಒಟ್ಟು ರೂ. 2776.95 ಲಕ್ಷಗಳ ಸಾಲವನ್ನು ಮಂಜೂರು ಮಾಡಿದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ: 10–9–2009ರ ಪತ್ರದಲ್ಲಿ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರು ಪ್ರತಿ ಕಾಲೇಜಿನ ಕಟ್ಟಡ ಕಾಮಗಾರಿಗೆ ರೂ. 121.00 ಲಕ್ಷಗಳ ವೆಚ್ಚದಲ್ಲಿ ಕೈಗೊಳ್ಳುವಂತೆ ಪರಿಷ್ಕೃತ ಪ್ರಸ್ತಾವನೆಯಲ್ಲಿ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 204 ಯೋಸಕ 2009, ಬೆಂಗಳೂರು, ದಿನಾಂಕ: 14ನೇ ಡಿಸೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ನಬಾರ್ಡ್ ಸಂಸ್ಥೆಯವರು ಅನುಮೋದಿಸಿರುವ ಪಟ್ಟಿಯಲ್ಲಿ ಈ ಕೆಳಕಂಡ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಕಟ್ಟಡ ಕಾಮಗಾರಿಗಳನ್ನು "ರೈಟ್ಸ್" ಸಂಸ್ಥೆಗೆ (ಕರ್ನಾಟಕ ಪಾರದರ್ಶಕ ಕಾಯ್ದೆಯಡಿ ವಿನಾಯಿತಿ ನೀಡಿದೆ) ವಹಿಸಿ 2009–10ನೇ ಸಾಲಿಗೆ ಒದಗಿಸಲಾಗಿರುವ ಅನುದಾನದಲ್ಲಿ ಕೂಡಲೇ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವಂತೆ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಈ ಕೆಳಕಂಡ ಷರತ್ತನ್ನು ವಿಧಿಸಿ ಅನುಮತಿ ನೀಡಲಾಗಿದೆ.

| ಕ್ರಸಂ | ಕಾಮಗಾರಿಗಳ ವಿವರ | ಒಟ್ಟು ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ |
|---|---|---|
| 1 | ಸಪ್ರದಕಾ, ಕನಕಗಿರಿ, ಗಂಗಾವತಿ ತಾಲ್ಲೂಕು, ಕೊಪ್ಪಳ ಜಿಲ್ಲೆ | 121.00 |
| 2 | ಸಪ್ರದಕಾ, ನೆಲಮಂಗಲ, ಬೆಂಗಳೂರು ಗ್ರಾಮಾಂತರ ಜಿಲ್ಲೆ | 121.00 |
| 3 | ಸಪ್ರದಕಾ, ಹಾರೋಹಳ್ಳಿ, ಕನಕಪುರ ತಾ: ರಾಮನಗರ ಜಿಲ್ಲೆ | 121.00 |
| 4 | ಸಪ್ರದಕಾ, ನೊಣವಿನಕೆರೆ, ತಿಪಟೂರು ತಾ: ತುಮಕೂರು ಜಿಲ್ಲೆ | 121.00 |
| 5 | ಸಪ್ರದಕಾ, ಕುರುಗೋಡು, ಬಳ್ಳಾರಿ ತಾ: ಬಳ್ಳಾರಿ ಜಿಲ್ಲೆ | 121.00 |

| ಕ್ರ.ಸಂ | ಕಾಮಗಾರಿಗಳ ವಿವರ | ಒಟ್ಟು ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ |
|---|---|---|
| 6 | ಸಪ್ರದಕಾ, ಲಿಂಗಸುಗೂರು, ರಾಯಚೂರು ಜಿಲ್ಲೆ | 121.00 |
| 7 | ಸಪ್ರದಕಾ, ಶೃಂಗೇರಿ, ಚಿಕ್ಕಮಗಳೂರು ಜಿಲ್ಲೆ | 121.00 |
| 8 | ಸಪ್ರದಕಾ, ಗದಗ | 121.00 |

**ಷರತ್ತುಗಳು:**

- ಸದರಿ ಕಾಮಗಾರಿಯನ್ನು ಈಗಾಗಲೇ ನಿಗದಿಯಾಗಿರುವ ಆಯವ್ಯಯದ ಮಿತಿಯಲ್ಲಿಯೇ ಪೂರ್ಣಗೊಳಿಸಲು ಸೂಚಿಸಿದೆ. ನಬಾರ್ಡ್ ಕಾಮಗಾರಿಗಳಿಗೆ ನಕ್ಷೆ ಬದಲಾಯಿಸಬೇಕಾದಲ್ಲಿ ನಬಾರ್ಡ್ ನಿಗದಿಪಡಿಸಿದ ಅಂದಾಜಿನಲ್ಲಿಯೇ ಸಲ್ಲಿಸಿ ನಬಾರ್ಡ್ ಅನುಮತಿ ಪಡೆಯತಕ್ಕದ್ದು.
- ಸದರಿ ಕಾಮಗಾರಿಗಳಿಗೆ ಸಕ್ಷಮ ಪ್ರಾಧಿಕಾರದಿಂದ ತಾಂತ್ರಿಕ ಅನುಮೋದನೆ ಪಡೆದು 2008–09ನೇ ಸಾಲಿನಲ್ಲಿ ಬಿಡುಗಡೆ ಮಾಡಿರುವ ಅನುದಾನವನ್ನು ಬಳಸಿಕೊಂಡು ಕೂಡಲೇ ಕಾಮಾಗಾರಿಯನ್ನು ಪ್ರಾರಂಭಿಸಲು ಕ್ರಮವಹಿಸುವಂತೆ ಸೂಚಿಸುವುದು.
- ಕಟ್ಟಡ ನಿರ್ಮಾಣದ ಗುಣಮಟ್ಟದ ಬಗ್ಗೆ ನಿಗಾ ವಹಿಸಲು ಸಂಬಂಧಿಸಿದ ಕಾಲೇಜುಗಳ ಪ್ರಾಂಶುಪಾಲರಿಗೆ ಸೂಕ್ತ ನಿರ್ದೇಶನ ನೀಡತಕ್ಕದ್ದು.
- ಕೇಂದ್ರ ಕಛೇರಿಯಿಂದ ತಿಂಗಳಿಗೊಮ್ಮೆ ಕಟ್ಟಡ ನಿರ್ಮಾಣದ ಕಾಮಗಾರಿ ಅಭಿವೃದ್ದಿಯನ್ನು ಪರಿಶೀಲಿಸಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸತಕ್ಕದ್ದು.
- ಕಟ್ಟಡ ನಿರ್ಮಾಣ ಕಾಮಗಾರಿಯನ್ನು ವಹಿಸುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.
- ಕಟ್ಟಡವನ್ನು ಪೂರ್ಣಗೊಳಿಸಿ ಕಾಲೇಜಿಗೆ ಹಸ್ತಾಂತರಿಸಿದ ನಂತರ ಸಂಬಂಧಿಸಿದ ಕಾಲೇಜಿನ ಪ್ರಾಂಶುಪಾಲರು ಪ್ರಮಾಣ ಪತ್ರವನ್ನು ಕೇಂದ್ರ ಕಛೇರಿಗೆ ಸಲ್ಲಿಸಲು ಅವರಿಗೆ ಸೂಚನೆ ನೀಡುವುದು.
- ಪ್ರತಿ ಮಾಹೆಯ ಕಾಮಗಾರಿಯ ಪ್ರಗತಿ ವರದಿಯನ್ನು ಆಯಾ ಮಾಹೆಯ ಎಂ.ಎಂ.ಆರ್ ವರದಿಯಲ್ಲಿ ನಮೂದಿಸತಕ್ಕದ್ದು.
- ಕಾಮಗಾರಿಯ ಪ್ರಗತಿಯನ್ನು ಆಧರಿಸಿ ಹಂತ ಹಂತವಾಗಿ ಅನುದಾನ ಬಿಡುಗಡೆ ಮಾಡಲು ಸೂಚಿಸಿದೆ.

ಇದಕ್ಕೆ ಸಂಬಂಧಿಸಿದ ಮೊತ್ತವನ್ನು 2009–10ನೇ ಸಾಲಿನ ಲೆಕ್ಕ ಶೀಷಿಕೆ 4202–01–203–1–01–139 ಅಡಿ ಒದಗಿಸಿರುವ ಅನುದಾನವನ್ನು ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ.ಎಫ್. ಮಾಗಿ**

ಪಿ.ಆರ್. 2846

ವಿಶೇಷಾಧಿಕಾರಿ ಮತ್ತು ಪದನಿಮಿತ್ತ, ಸರ್ಕಾರದ ಅಧೀನ ಕಾರ್ಯದರ್ಶಿ
ಉನ್ನತ ಶಿಕ್ಷಣ ಇಲಾಖೆ (ಯೋಜನೆ)

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ವಿಷಯ:** ರಾಜಭಾಷಾ (ವಿಧಾಯೀ) ಆಯೋಗವನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಲಾ 4 ಎಲ್‌ಎಂಪಿ 97, ದಿನಾಂಕ: 04–07–1997.

2) ಸರ್ಕಾರಿ ಆದೇಶ ಸಂಖ್ಯೆ: ಸಂವ್ಯಶಾಇ 01 ಎಲ್‌ಎಂಪಿ 2000, ದಿನಾಂಕ: 05–06–1999.

3) ಸರ್ಕಾರಿ ಆದೇಶ ಸಂಖ್ಯೆ: ಸಂವ್ಯಶಾಇ 01 ಎಲ್‌ಎಂಪಿ 2000, ದಿನಾಂಕ: 12–4–2001.

4) ಸರ್ಕಾರಿ ಆದೇಶ ಸಂಖ್ಯೆ: ಸಂವ್ಯಶಾಇ 10 ಭಾನಿವಿ 2002, ದಿನಾಂಕ: 22–4–2002.

5) ಸರ್ಕಾರದ ಆದೇಶ ಸಂಖ್ಯೆ: ಸಂವ್ಯಶಾಇ 18 ಭಾನಿವಿ 2003, ದಿನಾಂಕ: 4–9–2003

6) ಸರ್ಕಾರದ ಆದೇಶ ಸಂಖ್ಯೆ: ಸಂವ್ಯಶಾಇ 44 ಭಾನಿವಿ 2005, ದಿನಾಂಕ: 14–10–2005.

7) ಸರ್ಕಾರದ ಆದೇಶ ಸಂಖ್ಯೆ: ಸಂವ್ಯಶಾಇ 18 ಭಾನಿವಿ 2006, ದಿನಾಂಕ: 08–12–2006.

8) ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ: ಭಾನಿ 30/ಆಡಳಿತ/ರಾಭಾ (ವಿ) ಆ/2009, ದಿನಾಂಕ: 30–09–2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗದ ಕಾಲಾವಧಿಯನ್ನು 31ನೇ ಜನವರಿ 1999ರ ತನಕ ವಿಸ್ತರಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕಾಲಾವಧಿಯನ್ನು 1ನೇ ಫೆಬ್ರವರಿ 1999ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ.

ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಆಯೋಗದ ಕಾಲಾವಧಿಯನ್ನು ದಿನಾಂಕ: 30–5–2001 ರವರೆಗೆ ಮುಂದುವರಿಸಲಾಗಿದೆ.

ಮೇಲೆ (4)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಆಯೋಗದ ಕಾಲಾವಧಿಯನ್ನು ದಿನಾಂಕ: 30–5–2003 ರವರೆಗೆ ಮುಂದುವರಿಸಲಾಗಿದೆ.

ಮೇಲೆ (5)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಆಯೋಗವನ್ನು ಪುನರ್ ರಚಿಸಿ ಆಯೋಗದ ಅವಧಿಯನ್ನು ದಿನಾಂಕ: 30–5–2006ರವರೆಗೆ ವಿಸ್ತರಿಸಲಾಗಿದೆ.

ಮೇಲೆ (6)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಆಯೋಗವನ್ನು ಪುನರ್ ರಚಿಸಿ ದಿನಾಂಕ: 30–5–2006ರವರೆಗೆ ಮುಂದುವರಿಸಲಾಗಿದೆ.

ಮೇಲೆ (7)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಆಯೋಗವನ್ನು ಪುನರ್ ರಚಿಸಿ ದಿನಾಂಕ: 08–12–2009ರವರೆಗೆ ಮುಂದುವರಿಸಲಾಗಿದೆ.

ಮೇಲೆ (8)ರಲ್ಲಿ ಓದಲಾದ ಪ್ರಸ್ತಾವನೆಯಲ್ಲಿ ಆಯೋಗವನ್ನು ಒಬ್ಬರು ಅಧ್ಯಕ್ಷರು ಮೂರು ಅಥವಾ ನಾಲ್ಕು ಸದಸ್ಯರುಗಳಿಗೆ ಸೀಮಿತಗೊಳಿಸಿ ಪುನರ್ ರಚಿಸಲು ಭಾಷಾಂತರ ನಿರ್ದೇಶಕರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಆಯೋಗವನ್ನು ದಿನಾಂಕ: 08–12–2009ರಿಂದ ಜಾರಿಗೆ ಬರುವಂತೆ ಮೂರು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವರೆಡರಲ್ಲಿ ಯಾವುದೇ ಮೊದಲೋ ಅಲ್ಲಿಯವರೆಗೆ ಪುನರ್ ರಚಿಸಲು ನಿರ್ಣಯಿಸಲಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಂವ್ಯಾಶಾಇ 52 ಭಾನಿವಿ 2009, ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್ 2009**

ರಾಜ ಭಾಷಾ (ವಿಧಾಯೀ) ಆಯೋಗವನ್ನು ದಿನಾಂಕ: 08–12–2009ರಿಂದ ಜಾರಿಗೆ ಬರುವಂತೆ ಮೂರು ವರ್ಷಗಳವರೆಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವರೆಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಈ ಕೆಳಗೆ ನಮೂದಿಸಿರುವಂತೆ ಕೆಳಕಂಡ ಸದಸ್ಯರನ್ನೊಳಗೊಂಡಂತೆ ಪುನರ್ ರಚಿಸಲಾಗಿದೆ.

| | | |
|---|---|---|
| 1. | ಶ್ರೀ ಬೇಲೂರು ಜವರಯ್ಯ,<br>ನಿವೃತ್ತ ಭಾಷಾಂತರ ಇಲಾಖೆಯ ನಿರ್ದೇಶಕರು, ನಂ.11/69,<br>ಸಾರ್ವಭೌಮನಗರ, 7ನೇ ಮುಖ್ಯರಸ್ತೆ, ಎ.ಕ್ರಾಸ್, ಚಿಕ್ಕಲಸಂದ್ರ<br>ಬೆಂಗಳೂರು–560061. | ಅಧ್ಯಕ್ಷರು |
| 2. | ಶ್ರೀಮತಿ ಕೆ.ಎನ್. ಜಯಶ್ರೀ,<br>ನಿವೃತ್ತ ಭಾಷಾಂತರ ಇಲಾಖಾ ನಿರ್ದೇಶಕರು, ವಾರಿಜ ನಂ.1/2,<br>1ನೇ ಮಹಡಿ, ನೇತಾಜಿ ರಸ್ತೆ, ತ್ಯಾಗರಾಜನಗರ, ಬೆಂಗಳೂರು–28. | ಸದಸ್ಯರು |
| 3. | ಶ್ರೀ ವೆಂಕಟರಾಮಯ್ಯ,<br>ನಿವೃತ್ತ ಭಾಷಾಂತರ ಇಲಾಖೆಯ ನಿರ್ದೇಶಕರು, ನಂ.853, ಕೆರೆ<br>ಅಂಗಳ, 11ನೇ ವಿಭಾಗ, ನಾಗರಬಾವಿ 2ನೇ ಹಂತ, ಬೆಂಗಳೂರು | ಸದಸ್ಯರು |
| 4. | ಶ್ರೀ ಎಸ್. ರಾಮರಾವ್,<br>ನಿವೃತ್ತ ಭಾಷಾಂತರ ಇಲಾಖಾ ಉಪ ನಿರ್ದೇಶಕರು, ನಂ.339,<br>4ನೇ ಅಡ್ಡರಸ್ತೆ, ವಿದ್ಯಾಮಾನ್ಯನಗರ, ಅಂದ್ರಹಳ್ಳಿ, ವಿಶ್ವನೀಡಂ<br>ಪೋಸ್ಟ್, ಬೆಂಗಳೂರು–560 091. | ಸದಸ್ಯರು |
| 5. | ಶ್ರೀ. ಎಂ.ವೈ. ದೊಡಮನಿ<br>ನಿವೃತ್ತ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ,<br>ನಂ.248, ಪಶ್ಚಿಮಕಾರ್ಡ್ ರಸ್ತೆ, 2ನೇ ಹಂತ, ಮಹಾಲಕ್ಷ್ಮೀಪುರಂ,<br>ಬೆಂಗಳೂರು–560 086. | ಸದಸ್ಯರು |

ಈ ಅವಧಿಯಲ್ಲಿ ಆಯೋಗದ ಅಧ್ಯಕ್ಷರು ಮತ್ತು ಸರ್ಕಾರೇತರ ಸದಸ್ಯರುಗಳ ಸೇವಾ ಷರತ್ತುಗಳು ಪ್ರಸ್ತುತ ಜಾರಿಯಲ್ಲಿರುವ ಆದೇಶಗಳಿಗೆ ಒಳಪಟ್ಟಿರುತ್ತದೆ.

ಈ ಆಯೋಗಕ್ಕೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2052–ಸಚಿವಾಲಯ–ಸಾಮಾನ್ಯ ಸೇವೆ–092–08–ಉಪ ಲೆಕ್ಕಶೀರ್ಷಿಕೆ 059 ಭಾಷಾಂತರ ನಿರ್ದೇಶಕರು–ರಾಜಭಾಷಾ (ವಿಧಾಯೀ) ಆಯೋಗ (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 547 ವೆಚ್ಚ–10:2009, ದಿನಾಂಕ: 10–12–2009ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ. ಶ್ರೀಧರ್**

ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ,

ಸರ್ಕಾರದ ಉಪ ಕಾರ್ಯದರ್ಶಿ,

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

ಪಿ.ಆರ್. 2857

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಮೀರ್ ಅನೀಸ್ ಅಹಮದ್, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಹಿಂದಿನ ಭೂಸ್ವಾಧೀನಾಧೀಕಾರಿ, ಹೇಮಾವತಿ ನಾಲಾವಲಯ ತುಮಕೂರು ರವರ ವಿರುದ್ಧ ಇಲಾಖಾ ವಿಚಾರಣೆ ಆರೋಪಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ನೋಟೀಸ್ ಸಂ:ಸಿಆಸುಇ 240 ಎಸ್ಇಎನ್ 90 ದಿ: 25–08–2005.
2) ಶ್ರೀ ಮೀರ್ ಅನೀಸ್ ಅಹಮದ್, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಹಿಂದಿನ ಭೂಸ್ವಾಧೀನಾಧಿಕಾರಿ, ಹೇಮಾವತಿ ನಾಲಾವಲಯ ತುಮಕೂರು ರವರ. ದಿ: 10–10–05 ಉತ್ತರ
3) ಸರ್ಕಾರಿ ಆದೇಶ ಸಂ:ಸಿಆಸುಇ 200 ಕೆಇಪಿ 07 ದಿನಾಂಕ: 05–02–08.
4) ವಿಚಾರಣಾಧಿಕಾರಿಯವರ ವರದಿ ದಿ: 17–07–2009.

**ಪ್ರಸ್ತಾವನೆ:**

ಶ್ರೀ ಮೀರ್ ಅನೀಸ್ ಅಹಮದ್, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ರವರು ಹೇಮಾವತಿ ನಾಲಾ ವಲಯ, ತುಮಕೂರು ರಲ್ಲಿ ವಿಶೇಷ ಭೂಸ್ವಾಧಿನಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ದಿ: 01–10–88 ರಿಂದ ಜಾರಿಗೆ ಬರುವಂತೆ ಶ್ರೀ. ಜಾಕೀರ್ ಆಲಿ ಖಾನ್ ಎಂಬ ದಿನಗೂಲಿ ಬೆರಳಚ್ಚುಗಾರರನ್ನು ಅನಧಿಕೃತವಾಗಿ ದಿನಗೂಲಿ ಆಧಾರದ ಮೇಲೆ ಬೆರಳಚ್ಚುಗಾರರನ್ನಾಗಿ ನೇಮಿಸಿಕೊಂಡು ಸರ್ಕಾರದ ಆದೇಶಗಳನ್ನು ಉಲ್ಲಂಘಿಸಿರುವ ಹಾಗೂ ಸರ್ಕಾರಕ್ಕೆ ಅನಗತ್ಯ ವೆಚ್ಚ ಮತ್ತು ನಷ್ಟ ಉಂಟು ಮಾಡಿರುವ ಆರೋಪಗಳ ಸಂಬಂಧ ಅವರಿಗೆ ಮೇಲೆ (1)ರಲ್ಲಿ ಓದಲಾದ ದಿ: 25–8–05ರ ನೋಟಿಸನ್ನು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 ಮತ್ತು 11ಎ ರನ್ವಯ ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು. ನೋಟೀಸಿಗೆ ಸದರಿ ಅಧಿಕಾರಿಯು ಮೇಲೆ (2)ರಲ್ಲಿ ಓದಲಾದ ದಿ: 10–10–05ರಲ್ಲಿ ಉತ್ತರ ಸಲ್ಲಿಸಿ ತಮ್ಮ ಮೇಲೆ ಹೊರಿಸಲಾದ ಆರೋಪಗಳನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಅವರ ಮೇಲೆ ಹೊರಿಸಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ನಡೆಸಲು ಸರ್ಕಾರವು ತೀರ್ಮಾನಿಸಿ ಕ್ರಮ ಸಂ(3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣಾಧಿಕಾರಿಗಳು ಮೇಲೆ ಕ್ರಮ ಸಂ(4)ರಲ್ಲಿ ಸರ್ಕಾರಕ್ಕೆ ವರದಿಯನ್ನು ನೀಡಿ ಸದರಿ ಅಧಿಕಾರಿಯ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವರದಿ ನೀಡಿರುತ್ತಾರೆ.

ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ ಅಧಿಕಾರಿರವರು ಹೇಮಾವತಿ ನಾಲಾ ವಲಯದ ವಿಶೇಷ ಭೂಸ್ವಾಧೀನಾಧಿಕಾರಿಯಾಗಿ ತುಮಕೂರಿನಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ದಿನಗೂಲಿ ಆಧಾರದ ಮೇಲೆ ಬೆರಳಚ್ಚುಗಾರರನ್ನು ನೇಮಿಸಿಕೊಂಡಿರುವುದಿಲ್ಲ ಆದರೆ ಹೇಮಾವತಿ ನಾಲಾ ವಲಯದ ಕಾರ್ಯಪಾಲಕ ಅಭಿಯಂತರರ ಕಛೇರಿಯಿಂದ ಇವರಿಗೆ ದಿನಗೂಲಿ ಪಾವತಿ ಮಾಡಲು ತಮ್ಮ ಕಛೇರಿಯಲ್ಲಿ ಕಾರ್ಯನಿರ್ವಹಿಸಿರುವ ಕುರಿತು ಹಾಜರಾತಿ ಪತ್ರ ಮತ್ತು ನೀಡಿರುತ್ತಾರೆ. ಹಾಗೆಯೇ ಈ ದಿನಗೂಲಿ ನೌಕರರು ಉಚ್ಛ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ಸೇವೆಯಲ್ಲಿ ಮುಂದುವರೆಯಲು ಸಹ ಇವರು ಕಾರಣರಾಗಿರುವುದಿಲ್ಲ ಇವರ ಕಛೇರಿಯಲ್ಲಿ ಕೇವಲ ಒಂದು ಬೆರಳಚ್ಚು ಯಂತ್ರ ಮಾತ್ರ ಇದ್ದುದರಿಂದ ಮುಖ್ಯ ಅಭಿಯಂತರರು ಹೇಮಾವತಿ ನಾಲಾ ವಲಯ ಇವರು ಕಳುಹಿಸಿದ್ದ ಇನ್ನೊಬ್ಬ ಬೆರಳಚ್ಚುಗಾರರನ್ನು ಹಿಂತಿರುಗಿಸಿರುತ್ತಾರೆ. ವಿಚಾರಣಾಧಿಕಾಗಳು ತಮ್ಮ ವಿಚಾರಣಾ ವರದಿಯಲ್ಲಿ ಇಲಾಖೆಯು ಹಾಜರು ಪಡಿಸಿರುವ ದಾಖಲೆಗಳಿಂದ ಇವರ ವಿರುದ್ಧ ಮಾಡಿರುವ ಅಪಾದನೆಗಳು ಸಾಬೀತಾಗಿದೆಯೆಂದು ನಿರ್ಣಯಕ್ಕೆ ಬರಲು ಅಸಾಧ್ಯವಾಗಿರುವುದರಿಂದ, ಮೇಲಿನ ಆರೋಪಗಳು

ಸಾಬೀತಾಗಿರುವುದಿಲ್ಲವೆಂದು ತೀರ್ಮಾನಕ್ಕೆ ಬಂದಿರುತ್ತಾರೆ. ಈ ಹಿನ್ನೆಲೆಯಲ್ಲಿ ವಿಚಾರಣಾ ವರದಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ನಂತರ ಅಂಗೀಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂ: ಸಿಆಸುಇ 200 ಕೆಇಪಿ 2007, ಬೆಂಗಳೂರು, ದಿನಾಂಕ: 11ನೇ ಡಿಸೆಂಬರ್ 09**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಶ್ರೀ ಮೀರ್ ಅನೀಸ್ ಅಹಮದ್, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಅವರನ್ನು ದಿ: 25–08–2005ರ ನೋಟೀಸಿನಲ್ಲಿ ಮಾಡಲಾದ ಆರೋಪಗಳಿಂದ ಆರೋಪಮುಕ್ತರನ್ನಾಗಿಸುತ್ತದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

ಪಿ.ಆರ್. 2858

**ವಿಷಯ:** ಮೈಸೂರು ನಗರದ ಸುತ್ತಮುತ್ತಲಿನ ಜಮೀನು/ನಿವೇಶನಗಳ ಹಂಚಿಕೆಯಲ್ಲಿ ನಡೆದ ಅಕ್ರಮದಲ್ಲಿ ಭಾಗಿಗಳಾದ ಅಧಿಕಾರಿ/ನೌಕರರುಗಳ ವಿರುದ್ಧ ಇಲಾಖಾ ವಿಚಾರಣೆ ಶ್ರೀ ವಿಶ್ವಕಾಂತ್ ಚಾಕೂರ್ ನಿವೃತ್ತ ಪ್ರ.ದ.ಸ. ಹಾಗೂ ಮಂಡಲ ಪಂಚಾಯಿತಿ ಕಾರ್ಯದರ್ಶಿ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕೈಬಿಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂ:ಸಿಆಸುಇ 44 ಎಸ್ಇಎನ್ 04 ದಿ: 30–08–2005
2) ಶ್ರೀ ವಿಶ್ವಕಾಂತ್ ಚಾಕೂರ್ ಇವರ ಮನವಿ ದಿ: 04–10–2005

**ಪ್ರಸ್ತಾವನೆ:**

1992–93ರ ಅವಧಿಯಲ್ಲಿ ಮೈಸೂರು ತಾಲ್ಲೂಕಿನ ಕಸಬಾ ಹೋಬಳಿ ವ್ಯಾಪ್ತಿಯಲ್ಲಿ ಬರುವ ಹಿನಕಲ್ ಮಂಡಲ ಪಂಚಾಯತಿಯಲ್ಲಿ 250 ಎಕರೆ ಎರಗನಹಳ್ಳಿ ಮಂಡಲ ಪಂಚಾಯಿತಿಯಲ್ಲಿ 150 ಎಕರೆ, ಸಿದ್ಧಲಿಂಗಪುರ ಮಂಡಲ ಪಂಚಾಯತಿಯಲ್ಲಿ 150 ಎಕರೆ ಹಾಗೂ ಉದ್ಬೂರು (ಶ್ರೀರಾಂಪುರ) ಮಂಡಲ ಪಂಚಾಯತಿಯಲ್ಲಿ 100 ಎಕರೆ ಜಮೀನನ್ನು ಅಕ್ರಮ ಹಾಗೂ ಕಾನೂನು ಬಾಹಿರವಾಗಿ ಪಂಚಾಯತಿ ಖಾತೆಗಳನ್ನು ಮಾಡಿ ಸರ್ಕಾರಕ್ಕೆ ರೂ. 62,32,48,200/– ಗಳಷ್ಟು ನಷ್ಟ ಉಂಟು ಮಾಡಿರುವುದು ಲೋಕಾಯುಕ್ತ ತನಿಖೆಯಿಂದ ದೃಢಪಟ್ಟಿದ್ದು, ಅದರಲ್ಲಿ ಭಾಗಿಗಳಾದ ಶ್ರೀ.ಎಸ್. ಬಸಪ್ಪ ಹಿಂದಿನ ತಹಶೀಲ್ದಾರ್ ಹಾಲಿ ಕೆ.ಎ.ಎಸ್. ಅಧಿಕಾರಿ ಹಾಗೂ ಇತರೆ 15 ಮಂದಿ ಅಧಿಕಾರಿ/ನೌಕರರುಗಳ ವಿರುದ್ಧ ಇದೇ ಆರೋಪದ ಮೇಲೆ ಪೂರ್ಣ ಪ್ರಮಾಣದ ಇಲಾಖಾ ವಿಚಾರಣೆಯನ್ನು ನಡಸುವಂತೆಯೂ ಹಾಗೂ ಸರ್ಕಾರಕ್ಕೆ ಉಂಟಾಗಿರುವ ನಷ್ಟವನ್ನು ಅವರುಗಳಿಂದ ವಸೂಲು ಮಾಡಲು ಕ್ರಮಕೈಗೊಳ್ಳುವಂತೆ ಸನ್ಮಾನ್ಯ ಲೋಕಾಯಕ್ತರು ಶಿಫಾರಸ್ಸು ಮಾಡಿದ್ದು ಅದರಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 14–ಎ ಪ್ರಕಾರ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಸೇವೆಯಲ್ಲಿರುವ ಅಧಿಕಾರಿ/ನೌಕರರುಗಳ ವಿರುದ್ಧ ಮೇಲೆ ಓದಲಾದ ಕ್ರಮ ಸಂ(1)ರ ಆದೇಶದಲ್ಲಿ ಸನ್ಮಾನ್ಯ ಲೋಕಾಯುಕ್ತರ ಮೂಲಕ ವಿಚಾರಣೆ ನಡೆಸಬೇಕೆಂದು ಆದೇಶಿಸಲಾಗಿತ್ತು. ಸದರಿ 15 ಮಂದಿ ಅಪಾದಿತ ಅಧಿಕಾರಿ/ನೌಕರರುಗಳ ಪಟ್ಟಿಯಲ್ಲಿ ಶ್ರೀ ವಿಶ್ವಕಾಂತ್ ಚಾಕೂರ್, ಪ್ರ.ದ.ಸ. ಹಾಗೂ ಮಂಡಲ ಪಂಚಾಯತಿ ಕಾರ್ಯದರ್ಶಿ ರವರ ಹೆಸರು ಕೂಡ ಸೇರಿರುತ್ತದೆ. ಈ ಬಗ್ಗೆ ಶ್ರೀ ವಿಶ್ವಕಾಂತ್ ಚಾಕೂರ್‌ರವರು ಕ್ರಮ ಸಂ(2)ರಲ್ಲಿ ಸರ್ಕಾರಕ್ಕೆ ಪತ್ರ ಬರೆದು ಸರ್ಕಾರಿ ಸೇವೆಯಿಂದ ದಿ: 31–10–2006ರಂದು ನಿವೃತ್ತಿ ಹೊಂದಿದ್ದು ನಿವೃತ್ತಿ ಹೊಂದಿದ ಸುಮಾರು 9 ವರ್ಷಗಳ ಬಳಿಕ ಸಿ.ಸಿ.ಎ ನಿಯಮ ರನ್ವಯ ಇಲಾಖಾ ವಿಚಾರಣೆ ಪ್ರಾರಂಭಿಸಲಾಗಿದ್ದು ಹಾಗೂ ಇದೇ ಪ್ರಕರಣಕ್ಕೆ ಸಂಬಂಧಿಸಿದಂತೆ ಈಗಾಗಲೇ ಕಂದಾಯ ಇಲಾಖೆಯ ವತಿಯಿಂದ ವಿಚಾರಣೆ ನಡೆದು ಆರೋಪ ಸಬೀತಾದ ಕಾರಣ ತಮಗೆ ದಂಡನೆಯನ್ನು ವಿಧಿಸಲಾಗಿದೆಯೆಂದು ಆದರೂ ಪುನಃ ಸಿಆಸುಇ ಯಿಂದ ಎರಡನೇ ಬಾರಿಗೆ ವಿಚಾರಣೆ ನಡೆಸಲು ಆದೇಶಿಸಿರುವುದು ಸಾಮಾಜಿಕ ನ್ಯಾಯತತ್ವಗಳಿಗೆ ವಿರುದ್ಧವಾಗಿರುತ್ತದೆ ಎಂದು ತಿಳಿಸುತ್ತಾ ಸನ್ಮಾನ್ಯ ಲೋಕಾಯುಕ್ತರಿಗೆ ವಹಿಸಿದ್ದ ವಿಚಾರಣೆಯಲ್ಲಿ ತಮ್ಮ ಹೆಸರನ್ನು ಕೈಬಿಡುವಂತೆ ಕೋರಿದ್ದರು. ಇದು ಪರಿಶೀಲನೆಯಲ್ಲಿರುವಾಗ ಶ್ರೀ ವಿಶ್ವಕಾಂತ್ ಚಾಕೂರ್ ರವರು ಕರ್ನಾಟಕ ನ್ಯಾಯಮಂಡಳಿಯಲ್ಲಿ ಅರ್ಜಿ ಸಂ: 2121/2009 ಅನ್ನು ದಾಖಲಿಸಿ ತಮ್ಮ ವಿರುದ್ಧದ ಇಲಾಖಾ ವಿಚಾರಣೆಗೆ ಆದೇಶಿಸಿರುವ ಸರ್ಕಾರದ ಕ್ರಮವನ್ನು ಹಾಗೂ ಲೋಕಾಯುಕ್ತರು ಜಾರಿಗೊಳಿಸಿರುವ ದೋಷಾರೋಪಣೆ ಪಟ್ಟಿಯನ್ನು ಪ್ರಶ್ನಿಸಿ ಅವುಗಳನ್ನು ರದ್ದುಗೊಳಿಸುವಂತೆ ಕೋರಿರುತ್ತಾರೆ.

ಈ ಸಂಬಂಧವಾಗಿ ಕರ್ನಾಟಕ ನ್ಯಾಯಮಂಡಳಿ ದಿ: 20–05–09 ರಂದು ಈ ಕೆಳಕಂಡಂತೆ ಮಧ್ಯಂತರ ಆದೇಶವನ್ನು ನೀಡಿರುತ್ತದೆ.

Pending disposal of the atoreasid application, it is ordered by the inbunal on 20-05-09 that no further proceedings shall be taken aganst the applicant in pursuance of the Government Order bearing No. ಸಿಆಸುಇ 44 ಎಸ್ಇಎನ್ 04 ದಿ: 30-08-05 passed by the 1st Respondent intiating departmental enqury for a penod of three months or until the disposal of the application whichever is earlier.

Further it is made cleat that this order does not come in the way of the joint enqury initiated against other government sevants being continued against other D.G.O.S

ಶ್ರೀ ವಿಶ್ವಕಾಂತ್ ಚಾಕೂರ್ ರವರು ಸರ್ಕಾರಿ ಸೇವೆಯಿಂದ ದಿ: 30–10–1996 ರಂದು ನಿವೃತ್ತಿ ಹೊಂದಿರುವುದರಿಂದ ಕೆ.ಸಿ.ಎಸ್.ಆರ್. ನಿಯಮಾವಳಿಗಳ ನಿಯಮ 214 ರನ್ವಯ ಇವರ ವಿರುದ್ಧ ಇಲಾಖಾ ವಿಚಾರಣೆ ಹೂಡಲು ಅವಕಾಶವಿರುವುದಿಲ್ಲ ಇದಲ್ಲದೇ ಶ್ರೀ ವಿಶ್ವಕಾಂತ್ ಚಾಕೂರ್ ರವರು ಕೆ.ಎ.ಟಿಯಲ್ಲಿ ದಾಖಲಿಸಿರುವ ಅರ್ಜಿಗೆ ಸಂಬಂಧಿಸಿದಂತೆ ಕರ್ನಾಟಕ ನ್ಯಾಯಾಮಂಡಳಿ ನೀಡಿರುವ ತೀರ್ಪಿನ ಹಿನ್ನೆಲೆಯಲ್ಲಿ ಲೋಕಾಯುಕ್ತರಿಗೆ ವಿಚಾರಣೆಗೆ ವಹಿಸಿರುವ ಆದೇಶದಿಂದ ಇವರ ಹೆಸರನ್ನು ಕೈ ಬಿಡಲು ನಿರ್ಣಯಿಸಲಾಗಿದೆ. ಆದುದರಿಂದ ಈ ಆದೇಶಃ

**ಸರ್ಕಾರಿ ಆದೇಶ ಸಂ: ಸಿಆಸುಇ 44 ಎಸ್‌ಇಎನ್ 2004(ಸಿಆಸುಇ 106 ಕೆಇವಿ 2007),**

**ಬೆಂಗಳೂರು, ದಿನಾಂಕ: 8ನೇ ಡಿಸೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಕೆ.ಸಿ.ಎಸ್.ಆರ್. ನಿಯಮಾವಳಿಗಳ ನಿಯಮ 214 ರನ್ವಯ ಶ್ರೀ ವಿಶ್ವಕಾಂತ್ ಚಾಕೂರ್, ಪ್ರ.ದ.ಸ. ಹಾಗೂ ಮಂಡಲ ಪಂಚಾಯತಿ ಕಾರ್ಯದರ್ಶಿ ವಿರುದ್ಧ ಇಲಾಖಾ ವಿಚಾರಣೆ ಹೂಡಲು ಅವಕಾಶವಿಲ್ಲದ ಕಾರಣ ಸರ್ಕಾರವು ಶ್ರೀ ವಿಶ್ವಕಾಂತ್ ಚಾಕೂರ್, ಪ್ರ.ದ.ಸ. ಹಾಗೂ ಮಂಡಲ ಪಂಚಾಯತಿ ಕಾರ್ಯದರ್ಶಿ ಇವರ ವಿರುದ್ಧ ವಿಚಾರಣೆ ನಡೆಸಲು ಸನ್ಮಾನ್ಯ ಲೋಕಾಯುಕ್ತರಿಗೆ ವಹಿಸಿರುವ ಆದೇಶದಿಂದ ಸದರಿಯವರ ಹೆಸರನ್ನು ಕೈ ಬಿಡಲು ಆದೇಶಿಸಿದೆ. ಮುಂದುವರೆದು ಪ್ರಕರಣದಲ್ಲಿನ ಇತರೇ ಆರೋಪಿಗಳ ವಿರುದ್ಧ ಮಾಡಲಾದ ಆರೋಪಗಳ ಕುರಿತು ಲೋಕಾಯುಕ್ತ ವಿಚಾರಣೆಯು ಮುಂದುವರೆಯುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಆರ್. ನಾಗೇಂದ್ರ**

ಪಿ.ಆರ್. 2859 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**PERSONNEL AND ADMINISTRATIVE REFORMS SECRETARIAT**

**Sub:** Deputation of Sri, B. Dayananda, IPS, former, Sp. Kolar for deployment with UN Mission in KOSOVO- Issue orders reg.

**Read:** 1) Fax No. 21023/5/2003-PMA, dated 01-10-2003 of Ministry of Home Affairs, GOI, New Delhi.

2) Government Order No. DPAR 173 SME 2003, dated 08-10-2003

3) Letter No. GM/IPS/PF 107/V6-6/2007-08/940, dated: 14-01-2008 of A.G. Karnataka Bangalore

4) Letter No. CBI/57/2009-10 dated 04-07-2009 of DG & IGP, Bangalore.

5) No. 21023/5/2003-PMA, dated 19-11-2009 of MHA, GOI, New Delhi

**Preamble:**

Sanction was accorded for the deputation of Sri. B. Dayananda IPs, (KN-94) former, SP, Kolar District, for the deployment with UN Mission in KOSOVO (UNMIK) for a period of one year with effect from 08-10-2003 vide Government order dated: 08-10-2003 vide read at (2) above. The Accountant General, Karnataka Bangalore in his letter dated 14-01-2008, has stated that the deputation period of Sri B. Dayananda, IPS ends on 07-10-2004 as per the above Government order in Government Order No. DPAR 24 SPS 2005, dated 15-3-2005, the period of service from 16-11-2004 to 01-12-2004 were regularized as Compulsory Waiting and Joining time. As such, the AG has requsted to issue an order to regularize the period from 08-10-2004 to 15-11-2004. In this regard, Ministry of Home Affairs was consulted and the MHA in its letter dated 19-11-2009 has informed that Sri B. Dayananda, IPS had served with UN Mission in KOSOVO from 28-10-2003 to 10-11-2004 and he reported back in CIVPOL centre, New Delhi and attended the debriefing at CIVPOL Centre. Hence the following orders are issued.

**Government Order No. DPAR 22 SPS 2008, Bangalore, Dated: 16th December 2009**

The period spent by Sri. B. Dayananda, IPS (KN-94) in Connection with deployment with UN Mission in KOSOVO in 2003 and 2004 is regularized as follows.

i From 28-10-2003 to 10-11-2004 as period of deputation to UN Mission KOSOVO (in modification of GO No. DPAR 173 SME 2003 dated 08-10-2003)

ii From 11-1-2004 to 15-11-2004 as journey time from KOSOVO to New Delhi and debriefing programme at CIVPOL Centre, New Delhi.

Iii From 16-11-2004 to 01-12-2004 as compulsory waiting joining time as sanctioned in Go No. DPAR 24 SPS 2005 dated 15-3-2005. (He reported for duty as SP. Chitradurga 02-12-2004 FN in Pursuance of Government Notification No. DPAR 69 SPS 2004, dated: 23-11-2004.

By Order and in the name of the Governor of Karnataka

**ASKOK P ATRE**

P.R. 2860

Under Secretary to Government,

Department of Personnel and Administrative Reforms (Services-4)

**COMMERCE AND INDUSTRIES SECRETARIAT**

**No. CI 175 SPI 2008, Bangalore, Dated: 8th December 2009**

**AMENDMENT**

**Sub:** M/S/ Jewargi Power Pvt. Ltd. To establish Coal Based Power Plant pf 2x660 MW at Kattisangavi and Madri Villages of Jewargi Taluk, Gulbarga District-Reg.

**Read:** 1) G.O. No. CI 115 SPI 2008 dated 19-05-2008

2) G.O. No. CI 175 SPI 2008 dated 21-10-2008

3) Representaion letter No. NKPPL/C&I/ 11/2009 dated 15-06-2009 OF M/S/Narth Karnataka Power Private Limited.

The name of the Company indicated I Govt. Orders (1) & (2) referred above were issued in the name of M/S/ Jewargi power Pvt. Ltd. and Subesquently the company have changed the name and the Registrar of Companies has issued the Certificate of Incorporation with Change of name and hence M/s Jewargi power Pvt. Ltd. and Substituted by new name as "Narth Karnataka Power Private Limited".

By Order and in the name of the Governor of Karnataka

P.R. 2864

**APARNA PAVATE**

Desk Officer (Technical Cell) Commerce & industries Dept.

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ:** 2008–09ನೇ ಸಾಲಿನ ಡಿಆರ್‌ಡಿಎ ಆಡಳಿತ ಯೋಜನೆಯಡಿ ರಾಜ್ಯದ ಪಾಲಿನ ಬಾಕಿ ಅನುದಾನ ರೂ. 79,000 ಅನ್ನು ಕೊಪ್ಪಳ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಆರ್–20015:28: 2007–ಡಿಆರ್‌ಡಿಎ (ಎಸ್‌ಆರ್ ನಂ.10) ದಿನಾಂಕ: 03–04–08, (ಎಸ್‌ಆರ್ ನಂ.40) ದಿನಾಂಕ: 28–05–08 ಆರ್–17014/10/2008–09 ಡಿಆರ್‌ಡಿಎ (ಎಸ್‌ಎಲ್ 82) ದಿನಾಂಕ: 03–11–08 ಮತ್ತು (ಎಸ್. ನಂ.90) ದಿನಾಂಕ:14–11–2008 (ಎಸ್‌ಎಲ್ ನಂ.108) ದಿನಾಂಕ: 11–12–08, (ಎಸ್‌ಎಲ್ ನಂ. 141) ದಿನಾಂಕ: 09–01–09 (ಎಸ್‌ಎಲ್ ನಂ. 159) ದಿನಾಂಕ: 23–01–09 ಮತ್ತು (ಎಸ್ ನಂ. 186) ದಿನಾಂಕ: 19–02–09.

2) ಸರ್ಕಾರದ ಆದೇಶ ಸಂ: ಗ್ರಾಅಪ 7 ಎಸ್‌ಜೆವೈ (ಡಿಆರ್‌ಡಿಎ) 2008 ಬೆಂಗಳೂರು, ದಿನಾಂಕ: 23–05–08, 26–06–08, ದಿನಾಂಕ: 18–12–08, 31–01–09, 19–02–09 ಮತ್ತು 06–03–09.

3) ಸರ್ಕಾರದ ಆದೇಶ ಸಂ: ಗ್ರಾಅಪ 1 ಎಸ್‌ಜೆವೈ (ಡಿಆರ್‌ಡಿಎ) 2008 (ಪಿ) ಬೆಂಗಳೂರು, ದಿನಾಂಕ: 07–03–09, ತಿದ್ದುಪಡಿ 09–03–09, 21–03–09, 23–03–09, ಮತ್ತು 20–05–09.

4) ಕೇಂದ್ರ ಸರ್ಕಾರದ ಪತ್ರ ಆರ್ 17014/35/2008/ಡಿಆರ್‌ಡಿಎ (ಎಸ್‌ಎಲ್‌ನಂ. 232) ದಿನಾಂಕ: 31–03–2009.

**ಪ್ರಸ್ತಾವನೆ:**

ಡಿಆರ್‌ಡಿಎ ಆಡಳಿತ ಯೋಜನೆಯಡಿ, ಓದಲಾಗಿದೆ (4) ರನ್ವಯ ಕೇಂದ್ರ ಸರ್ಕಾರ 2008–09ನೇ ಸಾಲಿಗೆ ರಾಜ್ಯದ ಬಾಗಲಕೋಟೆ, ಬೆಂಗಳೂರು ನಗರ, ಬೆಳಗಾಂ, ಬಳ್ಳಾರಿ, ಬೀದರ್, ಬಿಜಾಪುರ, ಚಾಮರಾಜನಗರ, ಚಿಕ್ಕಮಗಳೂರು, ಚಿತ್ರದುರ್ಗ, ದಕ್ಷಿಣ ಕನ್ನಡ, ದಾವಣಗೆರೆ, ಧಾರವಾಡ, ಗದಗ್, ಗುಲ್ಬರ್ಗಾ, ಹಾಸನ, ಹಾವೇರಿ, ಕೊಡಗು, ಕೊಪ್ಪಳ, ಮಂಡ್ಯ, ಮೈಸೂರು, ಶಿವಮೊಗ್ಗ, ತುಮಕೂರು, ಉಡುಪಿ ಮತ್ತು ಉತ್ತರ ಕನ್ನಡ ಒಟ್ಟು 24 ಜಿಲ್ಲಾ ಪಂಚಾಯತಿಗಳಿಗೆ ಎರಡನೇ ಕಂತಿನ ಬಾಕಿ ಅನುದಾನ ರೂ. 1,22,19,000ಗಳನ್ನು ದಿನಾಂಕ: 31–03–2009 ರಂದು ಬಿಡುಗಡೆ ಮಾಡಿದ ಕಾರಣ ರಾಜ್ಯದ ಪಾಲಿನ ಅನುದಾನವನ್ನು ಸದರಿ ಸಾಲಿನಲ್ಲಿ ಬಿಡುಗಡೆ ಮಾಡಲು ಸಾಧ್ಯವಾಗಲಿಲ್ಲ. ಇದಕ್ಕನುಗುಣವಾಗಿ ರಾಜ್ಯದ ಪಾಲಿನ ಅನುದಾನವನ್ನು 2009–10ನೇ ಸಾಲಿನ ಆಯವ್ಯಯದಿಂದ ಭರಿಸಿ ದಿನಾಂಕ: 20–05–2009ರ ಆದೇಶದಲ್ಲಿ ರೂ. 24,13,000 ಬಿಡುಗಡೆ ಮಾಡಲಾಗಿತ್ತು. ಆದರೆ, ಕೊಪ್ಪಳ ಜಿಲ್ಲಾ ಪಂಚಾಯತಿಗೆ ಕೇಂದ್ರ ಸರ್ಕಾರ ಬಿಡುಗಡೆ ಮಾಡಿರುವ ಒಟ್ಟು ರೂ. 20,67,000 ಕ್ಕೆ ಅನುಗುಣವಾಗಿ ರಾಜ್ಯದ ಪಾಲಿನ ಅನುದಾನ ರೂ. 6,89,000 ಬಿಡುಗಡೆ ಮಾಡಬೇಕಾಗಿತ್ತು. ಆದರೆ ರಾಜ್ಯ ಸರ್ಕಾರ 2007–08ನೇ ಸಾಲಿನಲ್ಲಿ ಬಿಡುಗಡೆಯಾಗಿದ್ದ ಕೇಂದ್ರ ಸರ್ಕಾರದ ಅನುದಾನಕ್ಕೆ ಅನುಗುಣವಾಗಿ ರೂ. 4,81,000 ಬಿಡುಗಡೆ ಮಾಡಿದನ್ನು ಪರಿಗಣಿಸಿದ ಕಾರಣ ಉಳಿಕೆ ಅನುದಾನ ರೂ. 79,000 ಬಿಡುಗಡೆ ಮಾಡಿರಲಿಲ್ಲ. ಆದಕಾರಣ ರೂ. 79,000 ಕೊಪ್ಪಳ ಜಿಲ್ಲಾ ಪಂಚಾಯತಿಗೆ 2009–10 ನೇ ಸಾಲಿನ ಆಯವ್ಯಯದಿಂದ ಭರಿಸಿ ಬಿಡುಗಡೆ ಮಾಡಬೇಕಾಗಿರುವುದರಿಂದ ಈ ಆದೇಶ

**ಸರ್ಕಾರದ ಆದೇಶ ಸಂ: ಗ್ರಾಅಪ7 ಎಸ್‌ಜಿವೈ (ಡಿಆರ್‌ಡಿಎ 2008, ಬೆಂಗಳೂರು, ದಿನಾಂಕ: 14ನೇ ಡಿಸೆಂಬರ್ 2009**

ರಾಜ್ಯ ಸರ್ಕಾರವು ಡಿಆರ್‌ಡಿಎ ಆಡಳಿತ ಯೋಜನೆಯಡಿ 2008–09ನೇ ಸಾಲಿನ ಬಾಕಿ ಅನುದಾನ ರೂ. 79,000 (ರೂ. ಎಪ್ಪತ್ತೊಂಬತ್ತು ಸಾವಿರ ಮಾತ್ರ) ಗಳನ್ನು ಕೊಪ್ಪಳ ಜಿಲ್ಲಾ ಪಂಚಾಯತಿಗೆ 2009–2010 ನೇ ಸಾಲಿನ ಆಯವ್ಯಯದಿಂದ ಭರಿಸಿ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

**ಷರತ್ತುಗಳು :**

ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಅನುದಾನವನ್ನು ಜಿಲ್ಲಾ ಪಂಚಾಯತ್ ಸಿಬ್ಬಂದಿಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸುವುದು. ಇನ್ಯಾವುದೇ ಉದ್ದೇಶಗಳಿಗೆ ಉಪಯೋಗಿಸತಕ್ಕದ್ದಲ್ಲ.

ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ನಡುವೆ 75:25ರ ಅನುಪಾತದಲ್ಲಿರುತ್ತದೆ.

ಯೋಜನೆಯ ವೆಚ್ಚವನ್ನು ಲೆಕ್ಕಶೀರ್ಷಿಕೆ "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196 ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6–ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ– (ಕೇಂದ್ರ ಪುರಸ್ಕೃತ ಯೋಜನೆ) 2009–2010 (2515–00–196–6–06)" ರಡಿ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ ಎಫ್‌ಡಿ 1 ಜಡ್‌ಪಿಎ 2007 (ಪಿ2) ದಿನಾಂಕ: 26–04–2007ರನ್ವಯ ಜಿಲ್ಲಾ ಪಂಚಾಯತ್ ನಿಧಿ–1ಕ್ಕೆ ಜಮೆ ಮಾಡಿಕೊಂಡು ಪೇಯಿಸ್ ರಸೀದಿಯ ಮೂಲಕ ಜಿಲ್ಲಾ ಪಂಚಾಯತಿ ನಿಧಿಯಿಂದ ಅನುದಾನವನ್ನು ಖಜಾನೆಯಿಂದ ಪಡೆದುಕೊಂಡು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ವೆಚ್ಚವನ್ನು ಭರಿಸತಕ್ಕದ್ದು.

ಬಿಡುಗಡೆ ಮಾಡುವ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಕೊಪ್ಪಳ ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗಳು ಆಯಾ ಮಾಹೆಯ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5ನೇ ತಾರೀಖಿನೊಳಗೆ ನಿರ್ದೇಶಕರು (ಉಕಾ) ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಕೊಪ್ಪಳ ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನ ವರದಿಯನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 85 ಪಿಬಿಎಸ್ 2009 ದಿನಾಂಕ: 10–12–2009 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ.ಎ. ಮೇಘಣ್ಣವರ**

ಪಿ.ಆರ್. 2865

ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ವಿಷಯ:** ರಾಜೀವ್ ಗಾಂಧಿ ರಾಷ್ಟ್ರೀಯ ಕುಡಿಯುವ ನೀರು ನಿಯೋಗ–ಕೇಂದ್ರ ಪುರಸ್ಕೃತ ತ್ವರಿತ ಗ್ರಾಮೀಣ ನೀರು ಸರಬರಾಜು ಯೋಜನೆ ಮರುಭೂಮಿ ಅಭಿವೃದ್ಧಿ ಕಾರ್ಯಕ್ರಮಕ್ಕೆ (DDP) ಒಳಪಟ್ಟ ಪ್ರದೇಶಗಳಿಗೆ 2009–10ನೇ ಸಾಲಿನ ಅನುದಾನವನ್ನು ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:** 1) ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಸಚಿವಾಲಯ–ಕುಡಿಯುವ ನೀರು ಸರಬರಾಜು ಇಲಾಖೆ– ರಾಜೀವ್ ಗಾಂಧಿ ರಾಷ್ಟ್ರೀಯ ಕುಡಿಯುವ ನೀರು ನಿಯೋಗದ ಮಂಜೂರಾತಿ ಆದೇಶ ಸಂ: W-1120/13/2009/ARWSP/Water/51, ದಿ: 29–09–2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಮಂಜೂರಾತಿ ಆದೇಶದಲ್ಲಿ ಕೇಂದ್ರ ಸರ್ಕಾರವು ARWSP-DDP ಕಾರ್ಯಕ್ರಮದಡಿ 2009–10ನೇ ಸಾಲಿನ 1ನೇ ಕಂತಿನ ಬಾಕಿ ಅನುದಾನ ರೂ. 552.50ಲಕ್ಷಗಳನ್ನು ಬಿಡುಗಡೆ ಮಾಡಿದ್ದು, ಈ ಅನುದಾನವನ್ನು ಗ್ರಾಮೀಣ ಜನವಸತಿಗಳಲ್ಲಿ ಜನಜಾನುವಾರುಗಳ ಕುಡಿಯುವ ನೀರಿನ ವ್ಯವಸ್ಥೆಗಾಗಿ ಮತ್ತು ಶಾಲೆಗಳಲ್ಲಿ ಕುಡಿಯುವ ನೀರಿನ ಯೋಜನೆಗಳ ಅನುಷ್ಠಾನಕ್ಕಾಗಿ ಮುಂದುವರೆದ ಯೋಜನೆಗಳನ್ನು ಪೂರ್ಣಗೊಳಿಸುವ ಸಲುವಾಗಿ ರಾಜ್ಯದ 6 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಬೇಕಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ: ಗ್ರಾಅಪ 22 ಗ್ರಾನೀಸ (2) 09, ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್ 2009**

ಪೀಠಿಕೆಯಲ್ಲಿನ ಅಂಶಗಳನ್ನು ಪರಿಶೀಲಿಸಿ ARWSP- DDP ಕಾರ್ಯಕ್ರಮದಡಿ 2009–10ನೇ ಸಾಲಿನ 1ನೇ ಕಂತಿನ ಬಾಕಿ ಅನುದಾನ ರೂ. 552.50ಲಕ್ಷಗಳನ್ನು (ಐದುನೂರ ಐವತ್ತೆರಡು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಈ ಕೆಳಕಂಡಂತೆ 6 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಲು ಸರ್ಕಾರವು ಹರ್ಷಿಸುತ್ತದೆ.

| ಕ್ರಸಂ | ಜಿಲ್ಲಾ ಪಂಚಾಯತ್ | ಬಿಡುಗಡೆಯಾದ ಅನುದಾನ (ರೂ.ಲಕ್ಷಗಳಲ್ಲಿ) |
|---|---|---|
| 1 | ದಾವಣಗೆರೆ | 25.15 |
| 2 | ವಿಜಾಪುರ | 125.55 |
| 3 | ಬಾಗಲಕೋಟೆ | 150.60 |
| 4 | ರಾಯಚೂರು | 75.35 |
| 5 | ಕೊಪ್ಪಳ | 75.35 |
| 6 | ಬಳ್ಳಾರಿ | 100.50 |
| | **ಒಟ್ಟು** | **552.50** |

2. ಈ ಅನುದಾನವನ್ನು ARWSP- DDP ಕಾರ್ಯಕ್ರಮದ ನಿಯಮಾವಳಿಗಳ ಪ್ರಕಾರ ಮರುಭೂಮಿ ಅಭಿವೃದ್ಧಿ ಕಾರ್ಯಕ್ರಮಕ್ಕೆ ಒಳಪಟ್ಟ ಪ್ರದೇಶಗಳಲ್ಲಿ ಅದರಲ್ಲೂ ದಿನಂಪ್ರತಿ ತಲಾ 10 ಲೀಟರ್‌ಗಳಿಗಿಂತ ಕಡಿಮೆ ನೀರು ಪೊರೈಕೆಯಿರುವ ಗ್ರಾಮ/ಜನವಸತಿಗಳಿಗೆ (ಗ್ರಾಮೀಣ ಶಾಲೆಗಳೂ ಸೇರಿದಂತೆ) ಕುಡಿಯುವ ನೀರು ಸೌಕರ್ಯವನ್ನು ಹೆಚ್ಚಿಸಲು ಮಾತ್ರ ಬಳಸತಕ್ಕದ್ದು.

3. ಯೋಜನೆಗಳನ್ನು ಜನರಿಗೆ ಮತ್ತು ಜಾನುವಾರುಗಳಿಗೆ ಅನುಕ್ರಮವಾಗಿ 40 LPCD ಹಾಗೂ 30 LPCD ಪ್ರಮಾಣದಲ್ಲಿ ಕುಡಿಯುವ ನೀರನ್ನು ಪೊರೈಕೆ ಮಾಡುವ ಆಧಾರದ ಮೇಲೆ ರೂಪಿಸತಕ್ಕದ್ದು.

4. ಮೇಲ್ಕಂಡ ಅನುದಾನವನ್ನು ಸರ್ಕಾರದಿಂದ ಅನುಮೋದಿತವಾಗಿರುವ ಕ್ರಿಯಾ ಯೋಜನೆಯಡಿ ಸೇರಿರುವ ಕಾಮಗಾರಿಗಳ ಅನುಷ್ಠಾನಕ್ಕಾಗಿ ಮಾತ್ರ ಬಳಸತಕ್ಕದ್ದು. ಹೊಸ ಕಾಮಗಾರಿಗಳನ್ನು ತೆಗೆದುಕೊಳ್ಳಬೇಕಾದಲ್ಲಿ ಕೇಂದ್ರ ಸರ್ಕಾರವು ಗುರುತಿಸಿರುವ ಬ್ಲಾಕ್‌ಗಳಿಗೆ ಸಂಬಂಧಿಸಿದಂತೆ ಮಾತ್ರ ಕ್ರಿಯಾ ಯೋಜನೆಯನ್ನು ತಯಾರಿಸಿ, ಸರ್ಕಾರದ ಅನುಮೋದನೆ ಪಡೆದುಕೊಂಡು ಸಕ್ಷಮ ಪ್ರಾಧಿಕಾರದಿಂದ ತಾಂತ್ರಿಕ ಅನುಮೋದನೆ ಪಡೆಯತಕ್ಕದ್ದು. ಕಾಮಗಾರಿಗಳನ್ನು ಅನುಷ್ಠಾನಗೊಳಿಸಿದ ತರುವಾಯ ಪಂಚಾಯತ್‌ರಾಜ್ ಇಂಜಿನಿಯರಿಂಗ್ ವಿಭಾಗಗಳ ಮೂಲಕ ಬಿಲ್ ಪಾವತಿಸುವುದು.

5. ಈ ಯೋಜನೆಯಡಿ ಬಿಡುಗಡೆಯಾದ ಅನುದಾನದ ಮಾಹಿತಿಯನ್ನು ಆಯಾಯ ಗ್ರಾಮ ಪಂಚಾಯತ್ ವ್ಯಾಪ್ತಿಯಲ್ಲಿ ಸಾರ್ವಜನಿಕ ಮಾಹಿತಿಗಾಗಿ ಪೂರ್ವಭಾವಿಯಾಗಿ ಪ್ರಕಟಿಸಿ, ಚಾಲ್ತಿ ಪಾರದರ್ಶಕ ನೀತಿಯನ್ವಯ ಯೋಜನೆಗಳನ್ನು ಅನುಷ್ಠಾನಗೊಳಿಸತಕ್ಕದ್ದು.

6. ಕಾಮಗಾರಿಗಳ ಪ್ರಗತಿ ವರದಿಯನ್ನು ಪ್ರತಿ ಮಾಹೆ ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರಿಗೆ ಹಾಗೂ ಸರ್ಕಾರಕ್ಕೆ e-mail ಮುಖೇನ ಸಲ್ಲಿಸುವುದು. ಪ್ರಗತಿ ವರದಿಯಲ್ಲಿ ಕೈಗೊಂಡ ಕಾಮಗಾರಿಗಳ ಮತ್ತು ಜನವಸತಿಗಳ ವಿವರಗಳನ್ನು ಸಂಪೂರ್ಣವಾಗಿ ನಮೂದಿಸತಕ್ಕದ್ದು.

7. ಈ ಅನುದಾನದ ವೆಚ್ಚವನ್ನು ಲೆಕ್ಕಶೀರ್ಷಿಕೆ 4215–ನೀರು ಸರಬರಾಜು ಮತ್ತು ನೈರ್ಮಲ್ಯ ಮೇಲಣ ಬಂಡವಾಳ ವೆಚ್ಚ–01–ನೀರು ಸರಬರಾಜು–102–ಗ್ರಾಮೀಣ ನೀರು ಸರಬರಾಜು–9–ಟೆಸ್ಟ್ 04 ಟೆಸ್ಟ್ ಗ್ರಾಮೀಣ ನೀರು ಸರಬರಾಜು–132–ಬಂಡವಾಳ ವೆಚ್ಚಗಳು (ಯೋಜನೆ) (ARWSP- DDP) 2009–10ರಡಿ ಭರಿಸತಕ್ಕದ್ದು. (4215–01–102–9–04–132)

8. ಈ ಆದೇಶವನ್ನು ಬಿಡುಗಡೆಯಾದ ಅನುದಾನವನ್ನು ಆಯಾ ಜಿಲ್ಲಾ ಪಂಚಾಯತಿಗಳಿಗೆ Mission Director, KRWSSA ಇವರ (DD/Cheque ರೂಪದಲ್ಲಿ) ಮುಖೇನ ನಿಯಮಾನುಸಾರ ಆಯಾ ಜಿಲ್ಲಾ ಪಂಚಾಯತಿಗಳಿಗೆ ತಕ್ಷಣ ವರ್ಗಾಯಿಸಲ್ಪಡತಕ್ಕದ್ದು.

9. ಈ ಆದೇಶವನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂ:ಗ್ರಾಅಪ 171 ಪಿಬಿಎಸ್ 2009 ದಿ: 10–12–2009ರಲ್ಲಿನ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ.ಜಿ. ಹುಲಿಮನಿ**

ಪಿ.ಆರ್. 2866

ಸರ್ಕಾರದ ಅಧೀನ ಕಾರ್ಯದರ್ಶಿಗಳು

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## RURAL DEVELOPMENT AND PANCHAYATH RAJ SECRETARIAT

**Sub:** Constitution of State Level Scheme Sanctioning Committee Under NRDWP-reg

**Read:** 1) Government Order No. RDP 358 RWS (1)98 dt: 6-1-2003

**Preamble:**

A “State Level Empowered Committee” (SLEC) Was Constituted in the State Government Order cited above for the Purpose of (1) Sanctioning projects under the normal programme MNP/ARWSP and SMP, (2) Monitoring & reviewing the implementation of Projects relating to Rural water supply and Sanitation (3) giving directions to the implementing departments / agencies in the State for Efficient functioning of the Rural Water Supply & Sanitation activities and (4) monitoring HRD activities. In accordance with the revised guidelines of NRDWP, SLSSC is to be constituted for carrying out the functions which were being done by the earlier SLEC, Hence, it has been, decided to constitute the `State Level Scheme Sanctioning Committee (SLSSC)” under the Charirmanship of the principal Secretary, Rural Development & P. Raj Department as per the NRDWP provisions. Hence, the issue of this order.

**Government Order No. RDP 30 RWS(2) 09, Bangalore, Dated: 14th December 2009**

Government are pleased to constituted the `State Level Scheme Sanctioning Committee’ for Rural Water Supply and Sanitation Programme under NRDWP with the Composition and functions as under.

State Level Scheme Sanctioning Committee for Rural Water Supply

| | | |
|---|---|---|
| 1 | Principal Secretary to Govt, Rural Development & P. Raj Department | Chairperson |
| 2 | Principal Secretary OR A Senior Representative of Finance Dept. | Member |
| 3 | Principal Secretary OR A Senior Representative of Planning Dept. | Member |
| 4 | Principal Secretary OR A Senior Representative of Forest Dept. | Member |
| 5 | Principal Secretary OR A Senior Representative of Water Resourcesminor Irrigation Dept. | Member |
| 6 | Principal Secretary OR A Senior Representative of Health & Family Welfare Dept. | Member |
| 7 | Principal Secretary OR A Senior Representative of Urban Dev. Dept. | Member |
| 8 | Managing Director, KUWSD&B, Bangalore. | Member |
| 9 | Engineer-in Chief/Chief Engineer, Panachayat Raj Engineering Dept. | Member |
| 10 | Mission Director, State Water & Sanitation Mission, Bangalore | Member |
| 11 | Member Secreatry State Pollution Control Board, Bangalore | Member |
| 12 | Director, Mines & Geology Department, Gok, Bangalore | Member |

| | | |
|---|---|---|
| 13 | Regional Director, Central Ground Water Board, Bangalore | Member |
| 14 | Director, State Remote Sensing Applications Centre Bangalore | Member |
| 15 | A Representative of State Technical Agency (STA) | Member |
| 16 | A Representative of Rajiv Gandhi National Drinking Water Mission, GoI New Delhi | Member |
| 17 | Representative of State & Central Water Commission/Board | Member |
| 18 | Dr. D. Muralidharan, Scientist National Geophysical Research Institute, Hyderabad | Member |
| 19 | Director (RI) & E/O Joint Secretary RD & PR Department, Bangalore | Member Secretary |

**Functions:**

1. To Facilitate Mobilization of resources and services of related Departments and agencies.
2. To Monitor and review the Implementation of Projects/Schemes for Rural Water Supply and Sanitation.
3. To Clear Sub-Mission Projects.
4. To accord formal approval to the Action Plans under NRDWP/ MNP / DDp.
5. To approve and Sanction Projects / Schemes under MNP / ARWSP / Sub-Mission upto Rs. 5.00 Crore in each case and to clear the Projects of any amount subject to approval by the State Cabinet as per Transaction of Business Rules of Karnataka Government Secretariat.
6. To ensure co-ordination with various department for Scientific inputs for ensuring sustainable water Supply and sanitation systems.
7. To give appropriate directions to the implementing departments/agencies in the State for efficient Functioning of the Rural Water Supply and Sanitation activities.

**Additional Functions relating to HRD programme :**

1. Identification of departments / agencies whch are to participate in the HRD in the Rural Water Supply and Sanitation Sector and approval of all categories of staff / non officials requiring training in the Sector and also broadly approving the areas of training.
2. Laying down policy and implementation procedures for selection and depution for training and deployment after training.
3. Identification of existing training infrastructure available and planning its optimal use.
4. Approval of calendar of training to be prepared by the State Executive Committee
5. Review the Progress of HRD programme implementation.

The Committee may co-opt or invite any other members who are experts in RWS & S Sector for SLSSC meeting. The said meeting may be head as and when necessary and at least twice in a year.

This order comes into force with immediate effect and until further orders.

By Order and in the name of the Governor of Karnataka

**P.A. MEGHANNAVAR**

Director (RWS)& E/o Joint Secretary to Govt.

P.R. 2867 & member secretary SLSSC

Rural Development & P. Raj Department

**ANIMAL HUSBANDRY AND FISHERIES SECRETARIAT**

**Sub:** Enhancement of the age of superannuation of the teaching staff who are drawing UGC/ICAR pay scals in Karnataka Veterinary, Animal & Fisheries Sciences University, Bidar.

**Read:** Letter No. R/KVAFSU(B)/UGD/ICAR/age. Enhmt/09-10-2741, dated: 04-11-2009.

**Preamble:**

The Registrar, Karnataka Veterinary, Animal & Fisheries Sciences University, Bidar in his letter read at (1) above has requested to revise the pay scales of their teaching staff who are drawing UGC/ICAR pay scales and also to enhance the age of Superannuation of the teaching Community who are drawing UGC/ICAR pay scales from the existing 60 years to 62 years as per the instruction issued by Government of India vide letter dated: 13-03-2009 and on par with the action taken by the University of Agriculture Sciences and other Universities of Education Department.

The request made for revision of UGC/ICAR pay scales is examining separately. However, the request made for enhancement of the age of superannuation of teaching staff who are drawing UGC/ICAR pay scales in Karnataka Veterinary, Animal & Fisheries Sciences University, Bidar from the existing 60 years to 62 years has been examined and it is considered necessary to enhance the same to all the teaching staff of KVAFSU who are drawing VGC/ICAR pay Scales.

**Government Order No. AHF 277 VET 2009, Bangalore Dated: 17th December 2009**

In the Circumstances explained in the preamble, Government of Karnataka are pleased to enhance the age of superannuation of the teaching staff of Karnataka Veterinary, Animal & Fisheries Sciences University, Bidar who are drawing UGC/ICAR pay scales from the existing 60 years (Sixty years) to 62 years (Sixty two years) with immediate effect.

This order issues with the concurrence of Finance Department vide its Note No. FD 627 Exp.4/2009, dated: 11-12-2009.

By Order and in the name of the Governor of Karnataka

**B.K. SRINIVASAMURTHI**

P.R. 2868

Under Secretary to Government

Animal Husbandry & Fisheries Department (Animal Husbandry)

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಲಾ 151 ಎಲ್‌ಎಜಿ 2009, ಬೆಂಗಳೂರು, ದಿನಾಂಕ: 14ನೇ ಡಿಸೆಂಬರ್ 2009**

ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನಲ್ಲಿ ಹೊಸದಾಗಿ ಸ್ಥಾಪಿತವಾಗಿರುವ ಶೀಘ್ರ ವಿಲೇವಾರಿ ನ್ಯಾಯಾಲಯಕ್ಕೆ ವರ್ಗಾಯಿಸಲಾದ ಸಿವಿಲ್ ಪ್ರಕರಣಗಳಲ್ಲಿ ಸರ್ಕಾರದ ಪರವಾಗಿ ಪ್ರತಿನಿಧಿಸುವಂತೆ ಕಾರ್ಕಳ (ಹಿರಿಯ ಶ್ರೇಣಿ) ನ್ಯಾಯಾಲಯದ ಅಪರ ಸರ್ಕಾರಿ ವಕೀಲರಿಗೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಇ. ಶಿವಾನಂದ**

ಪಿ.ಆರ್. 2871

ಸರ್ಕಾರದ ಅಧೀನ ಕಾರ್ಯದರ್ಶಿ, (ಆಡಳಿತ –1)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಲಾ 104 ಎಲ್‌ಎಜಿ 2009, ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2009**

ಉತ್ತರ ಕನ್ನಡ ಜಿಲ್ಲಾಯ ಶಿರಸಿ ತಾಲ್ಲೂಕಿನಲ್ಲಿ ಹೊಸದಾಗಿ ಸ್ಥಾಪಿತವಾಗಿರುವ ಶೀಘ್ರ ವಿಲೇವಾರಿ ನ್ಯಾಯಾಲಯಕ್ಕೆ ವರ್ಗಾಯಿಸಲಾದ ಸಿವಿಲ್ ಪ್ರಕರಣಗಳಲ್ಲಿ ಸರ್ಕಾರದ ಪರವಾಗಿ ಪ್ರತಿನಿಧಿಸುವಂತೆ ಶಿರಸಿ ತಾಲ್ಲೂಕಿನ ಅಪರ ಸರ್ಕಾರಿ ವಕೀಲರಿಗೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಇ. ಶಿವಾನಂದ**

ಪಿ.ಆರ್. 2872

ಸರ್ಕಾರದ ಅಧೀನ ಕಾರ್ಯದರ್ಶಿ, (ಆಡಳಿತ –1)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ವಿಷಯ:** ಕರ್ನಾಟಕ ರಾಜ್ಯದ ಅಧೀನ ನ್ಯಾಯಾಲಯಗಳಲ್ಲಿ ಮುಖ್ಯ ಆಡಳಿತಾಧಿಕಾರಿ ಹುದ್ದೆಗಳ ವೇತನ ಶ್ರೇಣಿಯನ್ನು ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಲಾ 137 ಎಲ್‌ಏಸಿ 2005, ದಿನಾಂಕ: 25–03–2008

2) ರಿಜಿಸ್ಟ್ರಾರ್ ಜನರಲ್ ಅವರ ಪತ್ರ ಸಂಖ್ಯೆ: LCAI/220/96 (Uniform Staff Pattern) ದಿನಾಂಕ:02.03.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ(1)ರ ಸರ್ಕಾರದ ಆದೇಶದಲ್ಲಿ ರಾಜ್ಯದ ಅಧೀನ ನ್ಯಾಯಾಲಯಗಳಲ್ಲಿ ಸಮಾನ ರೀತಿಯ ಸಿಬ್ಬಂದಿ ವ್ಯವಸ್ಥೆ ಒದಗಿಸುವ ಸಲುವಾಗಿ ವಿವಿಧ ದರ್ಜೆಯ 779 ಹುದ್ದೆಗಳನ್ನು ಉನ್ನತೀಕರಿಸಲು ಮತ್ತು ವಿವಿಧ ಶ್ರೇಣಿಗಳ ಒಟ್ಟು 4334 ಹುದ್ದೆಗಳನ್ನು ಸೃಜಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ. ಅದರಂತೆ 36 ಮುಖ್ಯ ಆಡಳಿತಾಧಿಕಾರಿಗಳ ಹಾಗೂ ಹೊಸದಾಗಿ ಸೃಜಿಸುವ 2 ಹೆಚ್ಚುವರಿ ಹುದ್ದೆ, ಒಟ್ಟು 38 ಹುದ್ದೆಗಳ ವೇತನ ಶ್ರೇಣಿಯನ್ನು ಉನ್ನತೀಕರಿಸಲು ಸರ್ಕಾರವು ತಾತ್ವಿಕವಾಗಿ ಒಪ್ಪಿಗೆ ನೀಡಿರುತ್ತದೆ. ಮೇಲೆ ಓದಲಾದ ಕ್ರ.ಸಂ(2)ರ ಪತ್ರದಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್ ಅವರು ಕರ್ನಾಟಕ ರಾಜ್ಯ ನ್ಯಾಯಾಂಗ ಇಲಾಖಾ ನೌಕರರ ಸಂಘವು ಸಲ್ಲಿಸಿರುವ ಮನವಿಪತ್ರವನ್ನು ಲಗತ್ತಿಸುತ್ತಾ ದಿನಾಂಕ: 25–03–2008ರ ಸರ್ಕಾರದ ಆದೇಶದನ್ವಯ ಅಧೀನ ನ್ಯಾಯಾಲಯಗಳ 38 ಮುಖ್ಯ ಆಡಳಿತಾಧಿಕಾರಿಗಳ ವೇತನಶ್ರೇಣಿಯನ್ನು ರೂ. 11400–21600ರಿಂದ ರೂ. 14050–25050ರ ಶ್ರೇಣಿಗೆ ಉನ್ನತೀಕರಿಸುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಕಳುಹಿಸಿದ್ದಾರೆ.

ಈ ಮೇರೆಗೆ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂ: ಲಾ 143 ಎಲ್‌ಏಸಿ 2009, ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್ 2009**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಅಧೀನ ನ್ಯಾಯಾಲಯಗಳ 36 (ಮೂವತ್ತಾರು) ಹಾಗೂ ಹೊಸದಾಗಿ ಸೃಜಿಸುವ 2 (ಎರಡು), ಒಟ್ಟು 38 (ಮೂವತ್ತೆಂಟು) ಮುಖ್ಯ ಆಡಳಿತಾಧಿಕಾರಿ ಹುದ್ದೆಗಳ ವೇತನ ಶ್ರೇಣಿಯನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ರೂ. 11400–21600ರಿಂದ ರೂ. 14050–25050ರ ವೇತನ ಶ್ರೇಣಿಗೆ ಉನ್ನತೀಕರಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಇದನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 535 ವೆಚ್ಚ–10/2009 ದಿನಾಂಕ: 14–12–2009ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಇ. ಶಿವಾನಂದ**

ಪಿ.ಆರ್. 2873

ಸರ್ಕಾರದ ಅಧೀನ ಕಾರ್ಯದರ್ಶಿ, (ಆಡಳಿತ –1)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನಾ ಕಛೇರಿಯ ಅಭಿಯಂತರ ವಿಭಾಗದಲ್ಲಿ 4 ಕಂಪ್ಯೂಟರ್ ಅಪರೇಟರ್ ಹುದ್ದೆ ಮತ್ತು ಕಾರ್ಯಪಾಲಕ ಅಭಿಯಂತರರು, ಕೆಹೆಚ್‌ಎಸ್‌ಡಿಆರ್‌ಪಿ ವಿಭಾಗೀಯ ಕಛೇರಿಗಳಲ್ಲಿ 4 ಕಂಪ್ಯೂಟರ್ ಅಪರೇಟರ್ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸುವ ಬಗ್ಗೆ.

**ಓದಲಾಗಿದೆ:** 1) ದಿನಾಂಕ: 27–05–2009ರಂದು ನಡೆದ ಯೋಜನೆಯ ಕಾರ್ಯಕ್ರಮ ಚಾಲನಾ ಸಮಿತಿಯ 14ನೇ ಸಭೆಯ ನಡವಳಿಗಳು

2) ದಿನಾಂಕ: 24–07–2009ರಂದು ನಡೆದ ಯೋಜನಾ ಆಡಳಿತ ಮಂಡಳಿಯ 4ನೇ ಸಭೆಯ ನಡವಳಿಗಳು

3) ವಿಶ್ವಬ್ಯಾಂಕ್ ಇವರಿಂದ ಸ್ವೀಕೃತವಾದ–ಇ–ಮೇಲ್ ದಿನಾಂಕ: 30–08–2009.

**ಪ್ರಸ್ತಾವನೆ:**

ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯಡಿ ಅಭಿಯಂತರ ವಿಭಾಗದಲ್ಲಿ ಕೈಗೊಳ್ಳುವ ಸಿವಿಲ್ ಕಾಮಗಾರಿಗಳ ಪ್ರಗತಿಯ ನಿರ್ವಹಣೆ ಹಾಗೂ ಪರಿಶೀಲನೆ ನಡೆಸಲು ಅಂತರ್ಜಾಲ ಆಧಾರಿತ ಯೋಜನಾ ನಿರ್ವಹಣಾ ವ್ಯವಸ್ಥೆಯನ್ನು (WBPMS) ಅಳವಡಿಸಲಾಗಿದೆ. ಹಾಗೂ ರೂ 10 ಲಕ್ಷ ಮೀರಿದ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಯೋಜನೆಯ ಅಭಿಯಂತರ ವಿಭಾಗವು ಇ–ಸಂಗ್ರಹಣಾ ಪದ್ಧತಿಯನ್ನು ಅನುಸರಿಸುತ್ತಿದೆ. ಈ ಮೇಲಿನ ಕಾರ್ಯಗಳ ಸಂಬಂಧ ಅಗತ್ಯ ಡಾಟಾ ಎಂಟ್ರಿ (data entry) ಕಾರ್ಯನಿರ್ವಹಿಸಲು ಯೋಜನಾ ಕಛೇರಿಯ ಅಭಿಯಂತರ ವಿಭಾಗದಲ್ಲಿ 4

ಕಂಪ್ಯೂಟರ್ ಅಪರೇಟರ್ ಹುದ್ದೆಗಳನ್ನು ಹಾಗೂ ಬೆಂಗಳೂರು, ಮೈಸೂರು, ಧಾರವಾಡ ಮತ್ತು ಗುಲ್ಬರ್ಗಾ ಕಾರ್ಯಪಾಲಕ ಅಭಿಯಂತರರ ವಿಭಾಗೀಯ ಕಛೇರಿಗಳಿಗೆ ಒಂದೊಂದು ವಿಭಾಗೀಯ ಕಛೇರಿಗೆ ಒಬ್ಬರು ಕಂಪ್ಯೂಟರ್ ಅಪರೇಟರ್‌ನಂತೆ, 4 ಕಂಪ್ಯೂಟರ್ ಅಪರೇಟರ್ ಹುದ್ದೆಗಳನ್ನು ಒಟ್ಟು 8 ಕಂಪ್ಯೂಟರ್ ಅಪರೇಟರ್ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸುವ ಒಟ್ಟು ವಾರ್ಷಿಕ ಪುನರಾವರ್ತನೆಯ ವೆಚ್ಚ ರೂ. 5,92,800/– ಗಳಿಗೆ (ಪ್ರತಿ ಕಂಪ್ಯೂಟರ್ ಅಪರೇಟರಿಗೆ ಮಾಸಿಕ ರೂ. 6175/– ರಂತೆ ಪ್ರಸ್ತಾಪಿಸಲಾಗಿತ್ತು. ಮೇಲೆ (1)ರಲ್ಲಿ ಓದಲಾದ ದಿನಾಂಕ: 27–05–2009ರಲ್ಲಿ ನಡೆದ ಯೋಜನೆಯ ಕಾರ್ಯಕ್ರಮ ಚಾಲನಾ ಸಮಿತಿಯ 14ನೇಯ ಸಭೆಯಲ್ಲಿ ಸದರಿ ಪ್ರಸ್ತಾವನೆಗೆ ಅನುಮೋದನೆ ನೀಡಿ, ಈ ವಿಷಯವನ್ನು ಯೋಜನೆಯ ಆಡಳಿತ ಮಂಡಳಿ ಸಭೆಯಲ್ಲಿ ಮಂಡಿಸಲು ತೀರ್ಮಾನಿಸಲಾಯಿತು.

ಮೇಲೆ (2)ರಲ್ಲಿ ಓದಲಾದ ದಿನಾಂಕ: 24–07–2009 ರಲ್ಲಿ ನಡೆದ ಯೋಜನಾ ಆಡಳಿತ ಮಂಡಳಿಯ 4ನೇ ಸಭೆಯು ಸದರಿ ಪ್ರಸ್ತಾವನೆಗೆ, ವಿಶ್ವಬ್ಯಾಂಕಿನ ನಿರಾಪೇಕ್ಷಣೆಗೆ ಒಳಪಟ್ಟು, ಅನುಮೋದನೆ ನೀಡಿತು.

ಮೇಲೆ (3)ರಲ್ಲಿ ಓದಲಾದ ವಿಶ್ವಬ್ಯಾಂಕಿನ ದಿನಾಂಕ: 30–08–2009ರ ಇ–ಮೇಲ್ ಸಂದೇಶದಲ್ಲಿ ವಿಶ್ವಬ್ಯಾಂಕ್ ಸದರಿ ಪ್ರಸ್ತಾವನೆಗೆ ತನ್ನ ಒಪ್ಪಿಗೆ ನೀಡಿದೆ.

ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಎಫ್‌ಡಬ್ಲ್ಯೂ (ಪಿಆರ್) 119 ಡಬ್ಲ್ಯೂಬಿಎ 2009, ಬೆಂಗಳೂರು,**
**ದಿನಾಂಕ: 17ನೇ ಡಿಸೆಂಬರ್ 2009**

ಪ್ರಸ್ತಾವನೆಯನ್ನು ವಿವರಿಸಿರುವಂತೆ, ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯ ಅಭಿಯಂತರ ವಿಭಾಗದಲ್ಲಿ ಅಂತರ್ಜಾಲ ಆಧಾರಿತ ಯೋಜನಾ ನಿರ್ವಹಣಾ ವ್ಯವಸ್ಥೆಯನ್ನು (WBPMS) ಹಾಗೂ ಇ–ಸಂಗ್ರಹಣಾ ಪದ್ಧತಿಯ ಕಾರ್ಯಗಳ ಸಂಬಂಧ ಅಗತ್ಯ ಡಾಟಾ ಎಂಟ್ರಿ (data entry) ಕಾರ್ಯನಿರ್ವಹಿಸಲು ಯೋಜನಾ ಕಛೇರಿಯ ಅಭಿಯಂತರ ವಿಭಾಗದಲ್ಲಿ 4 ಕಂಪ್ಯೂಟರ್ ಅಪರೇಟರ್ ಹುದ್ದೆಗಳನ್ನು ಹಾಗೂ ಬೆಂಗಳೂರು, ಮೈಸೂರು, ಧಾರವಾಡ ಮತ್ತು ಗುಲ್ಬರ್ಗಾ ಕಾರ್ಯಪಾಲಕ ಅಭಿಯಂತರ ವಿಭಾಗೀಯ ಕಛೇರಿಗಳಲ್ಲಿ ಒಂದೊಂದು ವಿಭಾಗೀಯ ಕಛೇರಿಗೆ ಒಬ್ಬ ಕಂಪ್ಯೂಟರ್ ಅಪರೇಟರ್‌ನಂತೆ, 4 ಕಂಪ್ಯೂಟರ್ ಅಪರೇಟರ್ ಹುದ್ದೆಗಳನ್ನು ಒಟ್ಟು 8 ಕಂಪ್ಯೂಟರ್ ಅಪರೇಟರ್ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಿ ವಾರ್ಷಿಕ ಪುನರಾವರ್ತನೆಯ ವೆಚ್ಚ ರೂ. 5,92,800/– ಗಳಿಗೆ (ಪ್ರತಿ ಕಂಪ್ಯೂಟರ್ ಆಪರೇಟರಿಗೆ ಮಾಸಿಕ ರೂ. 6175/–ರಂತೆ ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2210–06–800–0–84–051(ಪಿ) ಯೋಜನಾ (ಸಾಮಾನ್ಯ ವೆಚ್ಚಗಳು)" ಅಡಿಯಲ್ಲಿ, 2009–10ನೇ ಸಾಲಿನಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ. ಶಶಿಧರ್**
ಸರ್ಕಾರದ ಉಪ ಕಾರ್ಯದರ್ಶಿ ಕೆಹೆಚ್‌ಎಸ್‌ಡಿಆರ್‌ಪಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್. 2874

**INFRASTRUCTURE DEVELOPMENT SECRETARIAT**

**Sub:** Release of funds to wards cost Sharing project of Bangalore-Mysore Doubling Railway project.

**Read:** 1) G.O.No. IDD 1 NSW 2002 dated 22-11-2002
2) G.O.No. IDD 1 NSW 2002 dated 22-03-2002
3) G.O.No. IDD 1 NSW 2002 dated 19-02-2003
4) G.O.No. IDD 47 NSW 2003 dated 12-09-2003
5) G.O.No. IDD 47 NSW 2003 dated 22-01-2004
6) G.O.No. IDD 47 NSW 2003 (P) dated 26-03-2004
7) G.O.No. IDD 51 NSW 2004 dated 19-07-2004
8) G.O.No. IDD 63 IDM 2005 dated 25-05-2005
9) G.O.No. IDD 66 NSW 2005 dated 15-12-2005
10) G.O.No. IDD 68 NSW 2003 dated 30-08-2006
11) G.O.No. IDD 68 NSW 2003 dated 24-07-2007
12) G.O.No. IDD 101 NSW 2007 dated 25-04-2008

13) G.O.No. IDD 101 NSW 2007 dated 25-10-2008
14) G.O.No. IDD 101 NSW 07 dated 04-03-2009
15) G.O.No. IDD 101 NSW 07 dated 28-03-2009
16) G.O.No. IDD 101 NSW 07 dated 31-03-2009
17) Letter No. W. 63/B/CN/BNC. Genl dated 19-11-2009 Of CE (Con.,) SWR, Bangalore.

**Preamble:**

The Government of Karnataka has so far released an amount of Rs. 112.80 crore towards its share of the in vestment on cost sharing projects through various Government orders read at Sl. No. (1) to (16) above.

2. The Chief Engineer (Con.,) South Western Railway, Bangalore in his letter read at Sl. No. (17) above, has stated that the total expenses of the project upto 31-10-09 is Rs. 173.42 crore and out of it 2/3 share of GoK is Rs. 115.6 crore and has requested to arrange to deposit balance Government of Karnataka's share amount of Rs. 2.81 crore towards cost sharing work doubling between Bangalore-Mysore.

3. Government of Karnataka after examining the request of railways has decided to release an amount of Rs. 2.81 crore (Two Crore Eighty one Lakhs only) towards doubling of Railway, track between Bangalore- Mysore during 2009-10 Hence this order.

**Government Order No. IDD 101 NSW 2007, Bangalore Dated: 18th December 2009**

After careful examination of the request of railway, Government is pleased to release an amount of Rs. 2.81 Crore (Two Crore Eighty one Lakhs only) being the part of the balance 2/3 share of GoK under the head of account 5465-01-190-3-08 Ramanagaram-Mysore railway doubling (P) other expenditure towards of Railway track between Bangalore- Mysore.

2. The Chief Executive Officer K-RIDE is authorized to draw the amount on a payee's receipt duly countersigned by the Under Secretary to Government Infrastructure Development Department and K-RIDE Shall in turn deposit the same with the Financial Adivor and Chief Accounts Officer (Construction), South western Railway, Bangalore.

3. This order is issued in accordance with the Financial powers delegated to Principal Secretaries/Secretaries vide G.O.No.FD 1 TFP 2008 dated 16-5-2008.

By Order and in the name of the Governor of Karnataka

**N. MANJULA GEETHA**

P.R. 2875

Under Secretary to Government

Infrastructure Development Department

**Sub:** Servicing of HUDCO Loan availed for Procurement of land for Bangalore International Airport Project.

**Read:** 1) G.O.No. IDD 47 DIA 2006 dated 29-06-2007
2) G.O.No. IDD 47 DIA 2006 (P) dated 24-09-2007
3) G.O.No. IDD 47 DIA 2006 (P) dated 25-09-2007
4) G.O.No. IDD 47 DIA 2006 (P) dated 03-12-2007
5) G.O.No. IDD 47 DIA 2006 dated 24-03-2008
6) G.O.No. IDD 47 DIA 2006 dated 23-06-2008
7) G.O.No. IDD 47 DIA 2007 dated 16-09-2008
8) G.O.No. IDD 47 DIA 2007 dated 15-12-2008
9) G.O.No. IDD 47 DIA 2006 dated 13-03-2009

10) G.O.No. IDD 47 DIA 2006 dated 12-08-2009
11) G.O.No. IDD 47 DIA 2006 dated 26-09-2009
12) Letter No. DGM (IPD)/2209/2009-10 dated 08-12-2009. of the Dy. G.M. (IPD), KSIIDC.

**Preamble:**

In the G.O's. read at Sl.No. (1) to (11) above, periodical release of funds have been made to KSIIDC for Servicing HUDCO loan for the period 2007, 2008 and the quarters ending on June 2009 and September 2009.

2. In the Letter dated 14-09-2009 read at S.No. (12) above, the DGM (IPD), KSIIDC has requested for release of an amount of Rs. 417.11 lakhs (Principal Rs. 272.58 lakhs + Interest Rs. 136.27 lakhs + Service Charges Rs. 8.26 Lakhs) towards servicing of HUDCO loan for the quarter ending December 2009.

3. Government have examined the proposal and decided to release the principal + interest amount. Hence the following order.

**Government Order No. IDD 47 DIA 2006, Bangalore Dated: 17th December 2009**

After careful examination of the Proposal, sanction of the Government is hereby accorded for release of Rs. 408.85 lakhs (Rupees Four Crore eight lakhs eighty five thousand only i.e. Principal Rs. 272.58 lakhs + Interest Rs. 136.27 Lakhs) to KSIIDC being the installment for the quarter ending December 2009 to Service the HUDCO Loan availed by KSIIDC for the Bangalore International Airport Project.

2. This expenditure shall be met from the Head of Account **"5465-01-190-1-04 (P) – BIAP Assistance for repayment of HUDCO loan-240 Debt Servicing"** out of the budget provision of Rs.2599.00 lakhs in 2009-10

3. The Managing Director, KSIIDC is authorized to draw the amount on a payees receipt duly Countersigned by the Under Secretary to Government Infrastructure Development Department.

4. This order is issued in accordance with delegation of Financial powers to Principal Secretaries/Secretaries to Govt.vide G.O.No.FD 1 TFP 2008 dated 16-5-2008.

By Order and in the name of the Governor of Karnataka

**N. MANJULA GEETHA**

P.R. 2876

Under Secretary to Government

Infrastructure Development Department

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಇಂಧನ ಇಲಾಖೆಯ ವಿಶೇಷ ಕಾರ್ಯದರ್ಶಿಯ ಹುದ್ದೆ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 29 ಸಸಿವಿ 2000, ದಿನಾಂಕ: 22–12–2000.
2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 60 ಸಸಿವಿ 2002, ದಿನಾಂಕ: 23–11–2002.
3) ಟಿಪ್ಪಣಿ ಸಂಖ್ಯೆ: ಇಎನ್/389/ಪಿಎಸ್‌ಜಿ 2009, ದಿನಾಂಕ: 11–06–2009.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ಹಾಗೂ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಇಂಧನ ಇಲಾಖೆಯಲ್ಲಿ ವಿಶೇಷ ಕಾರ್ಯದರ್ಶಿ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಿ ಮುಂದುವರಿಸಲಾಗಿತ್ತು. ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಇಂಧನ ಇಲಾಖೆಯ ಕಾರ್ಯಚಟುವಟಿಕೆಗಳು ಗಣನೀಯವಾಗಿ ಹೆಚ್ಚಳವಾಗಿದ್ದು, ಇಂಧನ ವಲಯದಲ್ಲಿ ಭಾರಿ ಸುಧಾರಣೆಯಾಗಿರುವುದರಿಂದ, ಸಚಿವಾಲಯದ ಮಟ್ಟದಲ್ಲಿ ಸರಿದೂಗಿಸಲು ಈ ಹಿಂದೆ ಇಲಾಖೆಯಲ್ಲಿ ಚಾಲ್ತಿಯಲ್ಲಿದ್ದ ವಿಶೇಷ ಕಾರ್ಯದರ್ಶಿ ಹುದ್ದೆ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ಪುನರುಜ್ಜೀವನಗೊಳಿಸುವುದು

ಅಗತ್ಯವಿದೆಯೆಂದು, ಆದ್ದರಿಂದ ಇಂಧನ ಇಲಾಖೆಯಲ್ಲಿ ವೇತನ ಶ್ರೇಣಿ ರೂ. 37,400–67000 + ಗ್ರೇಡ್ ಪೇ ನ ವಿಶೇಷ ಕಾರ್ಯದರ್ಶಿ ಹುದ್ದೆ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಸೃಜಿಸುವಂತೆ ಇಂಧನ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 336 ಸಅಸೇ 2009, ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್ 2009**

ಕರ್ನಾಟಕ ಸರ್ಕಾರದ ಸಚಿವಾಲಯದ ಇಂಧನ ಇಲಾಖೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 29 ಸಸಿವಿ 2000, ದಿನಾಂಕ: 22–12–2000 ರಂದು ಸೃಜಿಸಲಾದ ಈ ಕೆಳಕಂಡ ಹುದ್ದೆಗಳಲ್ಲಿ ವಿಶೇಷ ಕಾರ್ಯದರ್ಶಿ ಹುದ್ದೆಯ ವೇತನ ಶ್ರೇಣಿಯನ್ನು ರೂ. 37,400–67000 + ಗ್ರೇಡ್ ಪೇ ಗೆ ನಿಗಧಿಪಡಿಸಿದೆ. ಈ ಹುದ್ದೆಗಳಿಗೆ ಸಿಬ್ಬಂದಿಯನ್ನು ನಿಯೋಜನೆ ಮೇಲೆ ಭರ್ತಿ ಮಾಡುವಂತೆ ಹಾಗೂ ಯಾವ ಕಾರಣಕ್ಕೂ ಈ ಹುದ್ದೆಗಳಿಗೆ ನೇರ ನೇಮಕಾತಿ ಮಾಡಬಾರದೆಂಬ ಷರತ್ತಿಗೊಳಪಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

| | | |
|---|---|---|
| 1. | ವಿಶೇಷ ಕಾರ್ಯದರ್ಶಿ<br>(ವಿದ್ಯುಚ್ಛಕ್ತಿ ಸುಧಾರಣೆ) (ವೇತನ ಶ್ರೇಣಿ ರೂ. 37,400–67000 + ಗ್ರೇಡ್ ಪೇ) | 1 ಹುದ್ದೆ |
| 2. | ಭಾಷಾಂತರಕಾರರು | 1 ಹುದ್ದೆ |
| 3. | ಶೀಘ್ರಲಿಪಿಗಾರರು | 2 ಹುದ್ದೆಗಳು |
| 4. | ಕಿರಿಯ ಸಹಾಯಕರು | 1 ಹುದ್ದೆ |
| 5. | ವಾಹನಚಾಲಕ | 1 ಹುದ್ದೆ |
| 6. | ದಲಾಯತ್ | 2 ಹುದ್ದೆಗಳು |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ/1295 ವೆಚ್ಚ–12/2009, ದಿನಾಂಕ: 21-11–2009ರಲ್ಲಿ ನೀಡಿದ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 2878 ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ತಿದ್ದೋಲೆ**

**ಸಂಖ್ಯೆ: ಸಿಆಸುಇ 177 ಸೇಇಮು 2009, ಬೆಂಗಳೂರು, ದಿನಾಂಕ: 18ನೇ ಡಿಸೆಂಬರ್ 2009**

ಅಧಿಸೂಚನೆ ಸಂಖ್ಯೆ ಸಿಆಸುಇ 177 ಸೇಇಮು 2009, ದಿನಾಂಕ: 17–12–2009ರಲ್ಲಿನ ಕ್ರಮ ಸಂಖ್ಯೆ (2)ರಲ್ಲಿನ ಕಾಲಂ (2) ಮತ್ತು (3)ರಲ್ಲಿನ ನಮೂದುಗಳನ್ನು ದಿನಾಂಕ: 17–12–2009ರಿಂದಲೇ ಜಾರಿಗೆ ಬರುವಂತೆ ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

| ಕ್ರ. ಸಂ. | ಅಧಿಕಾರಿಯ ಹೆಸರು ಮತ್ತು ಪದನಾಮ | ವರ್ಗಾಯಿಸಿದ ಹುದ್ದೆ |
|---|---|---|
| 2) | ಶ್ರೀ ಎಂ.ಬಿ. ಬುರ್ಜಿ<br>ಮುಖ್ಯ ಇಂಜಿನಿಯರ್<br>ಕರ್ನಾಟಕ ರಾಜ್ಯ ಪೊಲೀಸ್ ವಸತಿ ನಿಗಮ, ಬೆಂಗಳೂರು | ಇವರ ಸೇವೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಒಳಾಡಳಿತ ಇಲಾಖೆಯಿಂದ ಹಿಂದಕ್ಕೆ ಪಡೆದು ಮುಖ್ಯ ಇಂಜಿನಿಯರ್, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಬೆಂಗಳೂರು ಈ ಹುದ್ದೆಗೆ ನೇಮಿಸಲು ಇವರ ಸೇವೆಯನ್ನು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ವಶಕ್ಕೆ ನೀಡಲಾಗಿದೆ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 2879 ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 27 ಇಮುವಿ 2008, ಬೆಂಗಳೂರು, ದಿನಾಂಕ : 18ನೇ ಡಿಸೆಂಬರ್ 2009**

**ವಿಷಯ:** ಶ್ರೀ ಬಿ. ಶಿವಶಂಕರ್, ಮುಖ್ಯ ಇಂಜಿನಿಯರ್ ಅವರ ಅಮಾನತ್ತನ್ನು ರದ್ದುಪಡಿಸಿ ಮತ್ತೆ ಸೇವೆಗೆ ತೆಗೆದುಕೊಳ್ಳುವ ಬಗ್ಗೆ.

ಶ್ರೀ ಬಿ. ಶಿವಶಂಕರ್, ಮುಖ್ಯ ಇಂಜಿನಿಯರ್ ಅವರನ್ನು ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 27 ಇಮುವಿ 2008, ದಿನಾಂಕ: 29–11–2008ರಲ್ಲಿ ದಿನಾಂಕ:6–11–2008ರಿಂದಲೇ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತಿನಲ್ಲಿಟ್ಟಿರುವುದರಿಂದಲೂ.

ಶ್ರೀ ಬಿ. ಶಿವಶಂಕರ್, ಮುಖ್ಯ ಇಂಜಿನಿಯರ್ ಅವರ ಅಮಾನತ್ತನ್ನು ರದ್ದುಪಡಿಸಿ ಅವರನ್ನು ಮತ್ತೆ ಸೇವೆಗೆ ತೆಗೆದುಕೊಳ್ಳಬೇಕೆಂದು ಸರ್ಕಾರವು ತೀರ್ಮಾನಿಸಿರುವ್ಯದರಿಂದಲೂ,

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(5)(ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಬಿ. ಶಿವಶಂಕರ್, ಮುಖ್ಯ ಇಂಜಿನಿಯರ್ ಅವರ ವಿರುದ್ಧ ಶಿಸ್ತಿನ ಕ್ರಮ / ಕ್ರಿಮಿನಲ್ ಮೊಕದ್ದಮೆಯನ್ನು ಬಾಕಿ ಇಟ್ಟು ಅವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿ ಅವರನ್ನು ಈ ಮೂಲಕ ಸೇವೆಗೆ ತೆಗೆದುಕೊಳ್ಳುತ್ತದೆ.

ಶ್ರೀ ಬಿ. ಶಿವಶಂಕರ್, ಮುಖ್ಯ ಇಂಜಿನಿಯರ್ ಅವರನ್ನು ಸೂಕ್ತ ಹುದ್ದೆಗೆ ನಿಯುಕ್ತಿಗೊಳಿಸಲು ಪ್ರತ್ಯೇಕವಾಗಿ ಕ್ರಮ ಕೈಗೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 2880 ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಪಸಂಮೀ 171 ಪಸಸೇ 2009, ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2009**

ಆದೇಶ ಸಂಖ್ಯೆ: ಪಸಂಮೀ 93 ಪಸಸೇ 2008, ದಿನಾಂಕ: 26–06–2008ರ ಅನುಬಂಧ–1ರಲ್ಲಿ ಕೋಲಾರ ಜಿಲ್ಲೆಯಿಂದ ನೂತನ ಚಿಕ್ಕಬಳ್ಳಾಪುರ ಜಿಲ್ಲಾ ಉಪನಿರ್ದೇಶಕರ ಕಛೇರಿಗೆ ಮರುವಿನ್ಯಾಸಗೊಳಿಸಿ ಸ್ಥಳಾಂತರಿಸಿರುವ ಹುದ್ದೆಗಳಿಗೆ ಸಂಬಂಧಿಸಿದಂತೆ ಡಿ–ದರ್ಜೆ ನೌಕರರು ಅಂಕಣದ ಮುಂದೆ 'ಉಪನಿರ್ದೇಶಕರ ಕಛೇರಿಯಲ್ಲಿ ಮಂಜೂರಾಗಿರುವ 2 ಹುದ್ದೆಗಳಲ್ಲಿ ಒಂದು ಹುದ್ದೆ' ಎಂದಿರುವುದನ್ನು 'ಕುರಿ ಪೋಷಕರ ಸಂಘ, ಕೋಲಾರ ಇಲ್ಲಿನ ಒಂದು ಡಿ–ದರ್ಜೆ ಹುದ್ದೆ' ಎಂದು ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ನಾಗರಾಜ**

ಪಿ.ಆರ್. 2881 ಪೀಠಾಧಿಕಾರಿ–2,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ, (ಪಶುಸಂಗೋಪನೆ–ಎ).

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕು, ಶಿರಾಳಕೊಪ್ಪ ಗ್ರಾಮದ ಶಾರದಾ ಸಾಮಿಲ್ ಜಾಗವನ್ನು ಪಟ್ಟಣ ಪಂಚಾಯತಿಗೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:** 1) ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಪತ್ರ ಸಂಖ್ಯೆ: ಎ5(4)ಜಿಎಫ್ಎಲ್.ವಿವ.2/07–08, ದಿನಾಂಕ: 04–10–2008.

**ಪ್ರಸ್ತಾವನೆ:**

ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕು, ಶಿರಾಳಕೊಪ್ಪ ಗ್ರಾಮದ ಸರ್ವೆ ನಂ.131ರಲ್ಲಿ 2.29 ಎಕರೆ ಜಮೀನು ಶ್ರೀ ಲಿಂಗಪ್ಪ, ಶ್ರೀ ಬಂಗಾರಪ್ಪ ಮತ್ತು ಶ್ರೀ ಗುರುಲಿಂಗಪ್ಪ ಇವರುಗಳ ಜಂಟಿ ಖಾತೆಯಲ್ಲಿರುತ್ತದೆ. ಈ ಜಮೀನಿನಲ್ಲಿ ಶಾರದ ರೈಸ್ ಮತ್ತು ಸಾಮಿಲ್‌ಗಳಿದ್ದು, ಇದರ ಪಾಲುದಾರರಲ್ಲಿ ಒಬ್ಬರಾದ ಶ್ರೀ ಎಂ.ಎಂ. ಮಹದೇವಯ್ಯ ಇವರು ಸರ್ಕಾರಕ್ಕೆ ಕೊಡಬೇಕಾದ ಬಾಕಿ ಹಣದ ಪ್ರಯುಕ್ತ ಕಂದಾಯ ಇಲಾಖೆಯು ದಿನಾಂಕ: 04–12–1969 ರಂದು ಹರಾಜು ಮಾಡಿದ್ದು, ವಲಯ ಅರಣ್ಯಾಧಿಕಾರಿ, ಸೊರಬ ಇವರು ಹರಾಜಿನಲ್ಲಿ ರೂ. 1–00 ಬಿಡ್ ಹಣಕ್ಕೆ ಖರೀದಿಸಿರುತ್ತಾರೆ.

ಶಿರಾಳಕೊಪ್ಪ ಪಟ್ಟಣ ಪಂಚಾಯತಿ ವತಿಯಿಂದ ಮೇಲ್ಕಂಡ ಜಮೀನಿನಲ್ಲಿ ಸರ್ಕ್ಯೂಟ್ ಹೌಸ್ ನಿರ್ಮಿಸಲು ಉದ್ದೇಶಿಸಿರುವುದರಿಂದ, ಅದನ್ನು ಪಟ್ಟಣ ಪಂಚಾಯತಿಗೆ ವರ್ಗಾಯಿಸುವಂತೆ ಮುಖ್ಯಾಧಿಕಾರಿ, ಪಟ್ಟಣ ಪಂಚಾಯತಿ,

ಶಿರಾಳಕೊಪ್ಪ ಇವರು ಕೋರಿರುವುದರಿಂದ, ಜಮೀನಿನ ಮೌಲ್ಯ ರೂ. 4,07,458–00 ನ್ನು ಪಾವತಿಸಿಕೊಂಡು ಪಟ್ಟಣ ಪಂಚಾಯತಿಗೆ ನೀಡಲು ಆಕ್ಷೇಪಣೆ ಇರುವುದಿಲ್ಲವೆಂದು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರು ಮೇಲೆ ಓದಲಾದ ದಿನಾಂಕ: 04–10–2008ರ ಪತ್ರದಲ್ಲಿ ಅಭಿಪ್ರಾಯಪಟ್ಟಿರುತ್ತಾರೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಮೇಲೆ ನಮೂದಿಸಿರುವ ಜಮೀನನ್ನು ಪಟ್ಟಣ ಪಂಚಾಯಿತಿಗೆ ಹಸ್ತಾಂತರಿಸಲು ನಿರ್ಧರಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 27 ಎಫ್‌ಡಿಪಿ 2008, ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2009**

ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕು, ಶಿರಾಳಕೊಪ್ಪ ಗ್ರಾಮದ ಸರ್ವೆ ನಂ.131ರಲ್ಲಿ ಅರಣ್ಯ ಇಲಾಖೆ ಸ್ವಾಧೀನದಲ್ಲಿರುವ 2.29 ಎಕರೆ ಜಾಗವನ್ನು, ಸರ್ಕ್ಯೂಟ್ ಹೌಸ್ ನಿರ್ಮಿಸಲು ಶಿರಾಳಕೊಪ್ಪ ಪಟ್ಟಣ ಪಂಚಾಯಿತಿಗೆ ಹಸ್ತಾಂತರಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಪಿ.ಆರ್. 2884

ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಶಿವಮೊಗ್ಗ ಜಿಲ್ಲೆ, ಸಾಗರ ತಾಲ್ಲೂಕು, ಕಣ್ಣೂರು ಗ್ರಾಮದ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸನೀಇ 02 ನಯೋಕಾ 2009 ದಿನಾಂಕ: 05.02.2009.

2. ದಿನಾಂಕ 14.09.2009ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ:ಮುಸದ/ತಾಂ.3/ಸಇಂ.8/ಶಿವಮೊಗ್ಗ/ಟೆಂಡರ್/2009–10/3665

3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ(ದಕ್ಷಿಣ)ವಲಯ, ಬೆಂಗಳೂರು ರವರ ದಿನಾಂಕ 21.10.2009ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/08–09/3055.

**ಪ್ರಸ್ತಾವನೆ:**

ಶಿವಮೊಗ್ಗ ಜಿಲ್ಲೆ, ಸಾಗರ ತಾಲ್ಲೂಕು, ಕಣ್ಣೂರು ಗ್ರಾಮದ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ರೂ.70.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 05/02/2009ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಶಿವಮೊಗ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಶಿವಮೊಗ್ಗ ಜಿಲ್ಲಾ ಟೆಂಡರ್ ಬುಲೆಟಿನ್ | 31.01.2009 |
| 2 | ವಿಜಯ ಕರ್ನಾಟಕ ದಿನ ಪತ್ರಿಕೆ | 07.02.2009 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಒಬ್ಬ ಗುತ್ತಿಗೆದಾರರು ಮಾತ್ರ ಖಾಲಿ ಟೆಂಡರ್ ಫಾರಂ ಪಡೆದು ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್ ಅನ್ನು ದಿನಾಂಕ 13/07/09ರಂದು ತೆರೆಯಲಾಗಿ ಈ ಗುತ್ತಿಗೆದಾರರ ಟೆಂಡರು ಅರ್ಹವಾಗಿದ್ದು, ಅವರ ಆರ್ಥಿಕ ಬಿಡ್‌ಗಳನ್ನು 24/07/2009 ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ 54,43,177/– |
|---|---|---|---|---|
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | | | | ರೂ 53,75,055/– |
| ಕ್ರ.ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ ರೂ. | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
| 1 | ವಿ. ದಯಾನಂದ, 1ನೇ ದರ್ಜೆ ಗುತ್ತಿಗೆದಾರರು | 67,80,695/– | 24.57 ಹೆಚ್ಚು | 26.15 ಹೆಚ್ಚು |

ಮೇಲ್ಕಂಡಂತೆ ಶ್ರೀ ವಿ.ದಯಾನಂದ, 1ನೇ ದರ್ಜೆ ಗುತ್ತಿಗೆದಾರರು ಏಕೈಕ ಟೆಂಡರ್‌ದಾರರಾಗಿದ್ದು ಇವರು ನಮೂದಿಸಿರುವ ಮೊತ್ತ ರೂ. 67,80,695/–ಗಳಾಗಿದ್ದು ಇವರು ಟೆಂಡರಿನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 26.15ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 20/10/09ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 53,75,055/–ಗಳ ಮೇಲೆ ಶೇಕಡ 14.95ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 61,78,626/– ಗಳಿಗೆ ಕಾಮಗಾರಿಯನ್ನು ಶ್ರೀ ವಿ.ದಯಾನಂದ, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 33 ಏನಿಯೋ 2009, ಬೆಂಗಳೂರು, ದಿನಾಂಕ: 29ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆ, ಸಾಗರ ತಾಲ್ಲೂಕು, ಕಣ್ಣೂರು ಗ್ರಾಮದ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 53,75,055/–ಗಳ ಮೇಲೆ ಶೇಕಡ 14.95ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 61,78,626/– ಗಳಿಗೆ (ಅರವತ್ತೊಂದು, ಲಕ್ಷದ ಎಪ್ಪತ್ತೆಂಟು ಸಾವಿರದ ಆರುನೂರ ಇಪ್ಪತ್ತಾರು ರೂ.ಗಳು ಮಾತ್ರ) ಶ್ರೀ ವಿ.ದಯಾನಂದ, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಪಿ.ಆರ್. 2532 ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ:** ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕು, ಹರಗಿ ರಾಮಲಿಂಗನವೊಡ್ಡು ಪಿಕಪ್ ಅಭಿವೃದ್ಧಿ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸನೀಇ 14 ಮಸಾವಿ 2009 (2) ದಿನಾಂಕ: 14.02.2009

2. ದಿನಾಂಕ 14.09.2009ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ:ಮುಸದ/ತಾಂ.3/ಸಇಂ.8/ಶಿವಮೊಗ್ಗ/ಟೆಂಡರ್/2009–10/3666

3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ(ದಕ್ಷಿಣ)ವಲಯ, ಬೆಂಗಳೂರು ರವರ ದಿನಾಂಕ 21.10.2009ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/08–09/3055.

**ಪ್ರಸ್ತಾವನೆ:**

ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕು, ಹರಗಿ ರಾಮಲಿಂಗನವೊಡ್ಡು ಪಿಕಪ್ ಅಭಿವೃದ್ಧಿ ಕಾಮಗಾರಿಯ ರೂ.40.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 14/02/2009ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಶಿವಮೊಗ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಶಿವಮೊಗ್ಗ ಜಿಲ್ಲಾ ಟೆಂಡರ್ ಬುಲೆಟಿನ್ | 31.01.2009 |
| 2 | ಉದಯವಾಣಿ ದಿನ ಪತ್ರಿಕೆ | 07.02.2009 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ 2 ಜನ ಗುತ್ತಿಗೆದಾರರು ಖಾಲಿ ಟೆಂಡರ್ ಫಾರಂ ಪಡೆದು ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ಟೆಂಡರ್‌ಗಳನ್ನು ದಿನಾಂಕ 15/06/09ರಂದು ತೆರೆಯಲಾಗಿದೆ. ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ 39,82,501/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ 37,01,926/– |

| ಕ್ರ.ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ ರೂ. | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 1 | ಟಿ.ಶೇಷಯ್ಯ, 1ನೇ ದರ್ಜೆ ಗುತ್ತಿಗೆದಾರರು | 45,75,380/– | 14.89 ಹೆಚ್ಚು | 23.59 ಹೆಚ್ಚು |
| 2 | ಸುಬ್ಬರಾಯಡು, 1ನೇ ದರ್ಜೆ ಗುತ್ತಿಗೆದಾರರು | 47,51,323/– | 19.31 ಹೆಚ್ಚು | 28.35 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ:1ರಲ್ಲಿರುವ ಶ್ರೀ ಟಿ.ಶೇಷಯ್ಯ, 1ನೇ ದರ್ಜೆ ಗುತ್ತಿಗೆದಾರರು ಅತೀ ಕಡಿಮೆ ದರ ನೀಡಿರುವ ಟೆಂಡರ್‌ದಾರರಾಗಿದ್ದು ಇವರು ನಮೂದಿಸಿರುವ ಮೊತ್ತ ರೂ. 45,75,380/– ಗಳಾಗಿದ್ದು ಇವರು ಟೆಂಡರಿನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 23.59ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 20/10/09ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 37,01,926/–ಗಳ ಮೇಲೆ ಶೇಕಡ 12.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 41.46,157/– ಗಳಿಗೆ ಕಾಮಗಾರಿಯನ್ನು ಶ್ರೀ ಟಿ.ಶೇಷಯ್ಯ, 1ನೇ ದರ್ಜೆ ಗುತ್ತಿಗೆದಾರರು ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 71 ಕೆಜಿದು 2009, ಬೆಂಗಳೂರು, ದಿನಾಂಕ: 29ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕು, ಹರಗಿ ರಾಮಲಿಂಗನವೊಡ್ಡು ಪಿಕಪ್ ಅಭಿವೃದ್ಧಿ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 37,01,926/–ಗಳ ಮೇಲೆ ಶೇಕಡ 12.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 41,46,157/– ಗಳಿಗೆ (ನಲವತ್ತೊಂದು ಲಕ್ಷದ ನಲವತ್ತಾರು ಸಾವಿರದ ಒಂದುನೂರ ಐವತ್ತೇಳು ರೂ.ಗಳು ಮಾತ್ರ) ಶ್ರೀ ಟಿ.ಶೇಷಯ್ಯ, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಪಿ.ಆರ್. 2533

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ:** ದಾವಣಗೆರೆ ಜಿಲ್ಲೆ, ದಾವಣಗೆರೆ ತಾಲ್ಲೂಕು, ಹಿಂಡಸಘಟ್ಟ ಬಳಿ ಹಳ್ಳಕ್ಕೆ ಚೆಕ್ ಡ್ಯಾಂ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸನೀಇ 14(5) ಮಸಾವಿ 2009 ದಿನಾಂಕ: 04.02.2009.

2. ದಿನಾಂಕ 27.08.2009ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ:ಮುಸದ/ತಾಂ.4/ಸಇಂ.10/ದಾವಣಗೆರೆ/ದಾವಣಗೆರೆ/ಹಿಂಡಸಘಟ್ಟ/ಚೆಕ್‌ಡ್ಯಾಂ/2009/3430.

3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ(ದಕ್ಷಿಣ)ವಲಯ, ಬೆಂಗಳೂರು ರವರ ದಿನಾಂಕ 21.10.2009ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/08–09/3055.

**ಪ್ರಸ್ತಾವನೆ:**

ದಾವಣಗೆರೆ ಜಿಲ್ಲೆ, ದಾವಣಗೆರೆ ತಾಲ್ಲೂಕು, ಹಿಂಡಸಘಟ್ಟ ಬಳಿ ಹಳ್ಳಕ್ಕೆ ಚೆಕ್ ಡ್ಯಾಂ ನಿರ್ಮಾಣ ಕಾಮಗಾರಿಯ 40.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 04/02/2009ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಚಿತ್ರದುರ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ದಾವಣಗೆರೆ ಜಿಲ್ಲಾ ಟೆಂಡರ್ ಬುಲೆಟಿನ್ | 13.02.2009 |
| 2 | ಪ್ರಜಾವಾಣಿ ದಿನ ಪತ್ರಿಕೆ | 13.02.2009 |
| 3 | ಉದಯವಾಣಿ ದಿನ ಪತ್ರಿಕೆ | 13.02.2009 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 10 ಜನ ಗುತ್ತಿಗೆದಾರರ ಪೈಕಿ ನಿಗದಿತ ದಿನದಂದು ಇಬ್ಬರು ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ಟೆಂಡರುಗಳನ್ನು ದಿನಾಂಕ18/06/09ರಂದು ತೆರೆಯಲಾಗಿದೆ. ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ 38,53,863/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | | | | ರೂ 37,75,990/– |
| ಕ್ರ.ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ ರೂ. | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
| 1 | ಕೆ.ಸಿದ್ದಲಿಂಗಪ್ಪ, 1ನೇ ದರ್ಜೆ ಗುತ್ತಿಗೆದಾರರು | 42,66,446/– | 10.71 ಹೆಚ್ಚು | 12.99 ಹೆಚ್ಚು |
| 2 | ಜಿ.ಎಂ. ಉಜ್ಜಣ್ಣ, 1ನೇ ದರ್ಜೆ ಗುತ್ತಿಗೆದಾರರು | 52,23,202/– | 35.53 ಹೆಚ್ಚು | 38.33 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ:1ರಲ್ಲಿರುವ ಶ್ರೀ ಕೆ.ಸಿದ್ದಲಿಂಗಪ್ಪ 1ನೇ ದರ್ಜೆ ಗುತ್ತಿಗೆದಾರರು ಅತಿ ಕಡಿಮೆ ದರ ನೀಡಿರುವ ಟೆಂಡರ್‌ದಾರರಾಗಿದ್ದು ಇವರು ನಮೂದಿಸಿರುವ ಮೊತ್ತ ರೂ. 42,66,446/–ಗಳಾಗಿದ್ದು ಇವರು ಟೆಂಡರಿನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 12.99ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 20/10/09ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 37,75,990/–ಗಳ ಮೇಲೆ ಶೇಕಡ 12.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.

42,29,109/– ಗಳಿಗೆ ಕಾಮಗಾರಿಯನ್ನು ಶ್ರೀ ಕೆ.ಸಿದ್ದಲಿಂಗಪ್ಪ 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 67 ಅಪಿಬಂ 2009, ಬೆಂಗಳೂರು, ದಿನಾಂಕ: 29ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಾವಣಗೆರೆ ಜಿಲ್ಲೆ, ದಾವಣಗೆರೆ ತಾಲ್ಲೂಕು, ಹಿಂಡಸಘಟ್ಟ ಬಳಿ ಹಳ್ಳಕ್ಕೆ ಚೆಕ್ ಡ್ಯಾಂ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 37,75,990/–ಗಳ ಮೇಲೆ ಶೇಕಡ 12.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 42,29,109/– ಗಳಿಗೆ (ನಲವತ್ತೆರಡು ಲಕ್ಷದ ಇಪ್ಪತ್ತೊಂಬತ್ತು ಸಾವಿರದ ಒಂಬೈನೂರ ಒಂಬತ್ತು ರೂ.ಗಳು ಮಾತ್ರ) ಶ್ರೀ ಕೆ.ಸಿದ್ದಲಿಂಗಪ್ಪ 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಪಿ.ಆರ್. 2534

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ:** ಹಾಸನ ಜಿಲ್ಲೆ, ಹಾಸನ ತಾಲ್ಲೂಕು, ಅಂಬುಗ ದೊಡ್ಡಕೆರೆ ಅಭಿವೃದ್ಧಿ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸನೀಇ 10 ನಯೋಕಾ 2007 ದಿನಾಂಕ: 11.12.2007.
2. ದಿನಾಂಕ 14.09.2009ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ:ಮುಸದ/ತಾಂ.2/ಸಇಂ.4/ಹಾಸನ/ಅಂಬುಗ/ಟೆಂಡರ್/2009–10/3676
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ(ದಕ್ಷಿಣ)ವಲಯ, ಬೆಂಗಳೂರು ರವರ ದಿನಾಂಕ 21.10.2009ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/08–09/3055.

**ಪ್ರಸ್ತಾವನೆ:**

ಹಾಸನ ಜಿಲ್ಲೆ, ಹಾಸನ ತಾಲ್ಲೂಕು, ಅಂಬುಗ ದೊಡ್ಡಕೆರೆ ಅಭಿವೃದ್ಧಿ ಕಾಮಗಾರಿಯ 60.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 11/12/2007ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಹಾಸನ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಹಾಸನ ಜಿಲ್ಲಾ ಟೆಂಡರ್ ಬುಲೆಟಿನ್ | 25.10.2008 |
| 2 | ಕರ್ನಾಟಕ ರಾಜ್ಯ ಪತ್ರ | 30.10.2008 |
| 3 | ವಿಜಯ ಕರ್ನಾಟಕ ದಿನ ಪತ್ರಿಕೆ | 02.11.2008 |
| 4 | ಕನ್ನಡಪ್ರಭ ದಿನ ಪತ್ರಿಕೆ | 01.11.2008 |
| 5 | ದಿ ಟೈಮ್ಸ್ ಆಫ್ ಇಂಡಿಯ ದಿನಪತ್ರಿಕೆ | 01.11.2008 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 6 ಜನ ಗುತ್ತಿಗೆದಾರರ ಪೈಕಿ ನಿಗದಿತ ದಿನದಂದು ಇಬ್ಬರು ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್ ಅನ್ನು ದಿನಾಂಕ 02/03/09ರಂದು ತೆರೆಯಲಾಗಿ, ಒಬ್ಬರು ಗುತ್ತಿಗೆದಾರರ ಟೆಂಡರು ಮಾತ್ರ ಅರ್ಹವಾಗಿದ್ದು, ಅವರ ಆರ್ಥಿಕ ಬಿಡ್‌ಗಳನ್ನು 22/05/2009 ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ 67,53,934/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | | | | ರೂ 70,34,477/– |
| ಕ್ರ.ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ ರೂ. | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
| 1 | ಹೆಚ್.ವಿ.ಕೃಷ್ಣ, 1ನೇ ದರ್ಜೆ ಗುತ್ತಿಗೆದಾರರು | 78,89,738/– | 16.81 ಹೆಚ್ಚು | 12.15 ಹೆಚ್ಚು |

ಮೇಲ್ಕಂಡಂತೆ ಶ್ರೀ ಹೆಚ್.ವಿ. ಕೃಷ್ಣ, 1ನೇ ದರ್ಜೆ ಗುತ್ತಿಗೆದಾರರು ಏಕೈಕ ಟೆಂಡರ್‌ದಾರರಾಗಿದ್ದು ಇವರು ನಮೂದಿಸಿರುವ ಮೊತ್ತ ರೂ. 78,89,738/–ಗಳಾಗಿದ್ದು ಇವರು ಟೆಂಡರಿನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 12.15ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 20/10/09ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 70,34,477/–ಗಳ ಮೇಲೆ ಶೇಕಡ 10.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 77,37,925/– ಗಳಿಗೆ ಕಾಮಗಾರಿಯನ್ನು ಶ್ರೀ ಹೆಚ್.ವಿ.ಕೃಷ್ಣ, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 70 ಕೆಜಿದು 2009, ಬೆಂಗಳೂರು, ದಿನಾಂಕ: 29ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಸನ ಜಿಲ್ಲೆ, ಹಾಸನ ತಾಲ್ಲೂಕು, ಅಂಬುಗ ದೊಡ್ಡಕೆರೆ ಅಭಿವೃದ್ಧಿ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 70,34,477/–ಗಳ ಮೇಲೆ ಶೇಕಡ 10.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 77,37,925/– ಗಳಿಗೆ (ಎಪ್ಪತ್ತೇಳು ಲಕ್ಷದ ಮುವತ್ತೇಳು ಸಾವಿರದ ಒಂಬೈನೂರ ಇಪ್ಪತ್ತೈದು ರೂ.ಗಳು ಮಾತ್ರ) ಶ್ರೀ ಹೆಚ್.ವಿ. ಕೃಷ್ಣಾ, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಪಿ.ಆರ್. 2535 ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ:** ಗುಲ್ಬರ್ಗಾ ಜಿಲ್ಲೆ, ಚಿತ್ತಾಪುರ ತಾಲ್ಲೂಕು, ಕಾಗಿನಾ ನದಿಗೆ ಅಡ್ಡಲಾಗಿ ಶಂಕರವಾಡಿ ಹತ್ತಿರ ಸೇತುವೆಯನ್ನೊಳಗೊಂಡ ಬಂದಾರ ನಿರ್ಮಾಣ ಕಾಮಗಾರಿಯ ಪರಿಷ್ಕೃತ ಅಂದಾಜು ಪತ್ರಿಕೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸನೀಇ 116 ಅಪಿಬಂ 2004, ದಿನಾಂಕ: 03.03.05.

2 ಸರ್ಕಾರದ ಆದೇಶ ಸಂಖ್ಯೆ: ಸನೀಇ 93 ಅವಿಸಂ 2006, ದಿನಾಂಕ: 19/06/07.

3. ದಿನಾಂಕ 29/10/2007ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರದ ಸಂಖ್ಯೆ:ಸನೀವೃಗು/ಯೋಶಾ–5/ಶಂಕರವಾಡಿ ಬಿಸಿಬಿ/ಪರಿಷ್ಕೃತ ಅಂದಾಜು ಪಟ್ಟಿ/2007–08/7895.

**ಪ್ರಸ್ತಾವನೆ:**

ಗುಲ್ಬರ್ಗಾ ಜಿಲ್ಲೆ, ಚಿತ್ತಾಪುರ ತಾಲ್ಲೂಕು, ಕಾಗಿನಾ ನದಿಗೆ ಅಡ್ಡಲಾಗಿ ಶಂಕರವಾಡಿ ಹತ್ತಿರ ಸೇತುವೆಯನ್ನೊಳಗೊಂಡ ಬಂದಾರ ನಿರ್ಮಾಣ ಮಾಡುವ ಕಾಮಗಾರಿಯನ್ನು ನಬಾರ್ಡ್‌ನ ಆರ್.ಐ.ಡಿ.ಎಫ್–Xರ ಸಾಲ ಸೌಲಭ್ಯದೊಂದಿಗೆ ಕೈಗೊಂಡಿದ್ದು, ಕಾಮಗಾರಿಯ 661.68 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ 1ರಲ್ಲಿ ಓದಲಾದ ದಿನಾಂಕ 03/03/05ರ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. ಪ್ರಸ್ತಾಪಿತ ಬ್ಯಾರೇಜಿನಲ್ಲಿ ಶೇಖರಿಸಲಾಗುವ ನೀರಿನಿಂದ ನದಿಯ ಎರಡೂ ಬದಿಯಲ್ಲಿಯ ಒಟ್ಟು 1383 ಹೆಕ್ಟೇರ್ ಜಮೀನಿನ ರೈತರು ಖಾಸಗಿ ಪಂಪುಸೆಟ್‌ಗಳನ್ನು ಅಳವಡಿಸಿಕೊಂಡು ಮುಂಗಾರು ಹಾಗೂ ಹಿಂಗಾರು ಬೆಳೆಗಳಿಗೆ ನೀರಾವರಿ ಸೌಲಭ್ಯ ಕಲ್ಪಿಸುವ ಸಲುವಾಗಿ ಈ ಯೋಜನೆಯನ್ನು ರೂಪಿಸಲಾಗಿದೆ. ಇದಲ್ಲದೆ, ಈ ಬ್ಯಾರೇಜಿನೊಂದಿಗೆ ನಿರ್ಮಿಸುವ ಸೇತುವೆಯಿಂದ ಶಂಕರವಾಡಿ ಗ್ರಾಮ ಹಾಗೂ ಸುತ್ತಮುತ್ತಲಿನ ಹಳ್ಳಿಗಳಿಗೆ ರಸ್ತೆ ಸಂಪರ್ಕ ಕಲ್ಪಿಸಲು ಯೋಜಿಸಿದೆ. ಇದರ ಜೊತೆಗೆ ಬೇಸಿಗೆ ಕಾಲದಲ್ಲಿ ಕುಡಿಯುವ ನೀರಿನ ಬಳಕೆಗಾಗಿ ಸಹ ಯೋಜಿಸಿದೆ.

2) ಕಾಮಗಾರಿಯನ್ನು ಅನುಷ್ಠಾನಗೊಳಿಸಲು ಟೆಂಡರ್ ಆಧಾರದ ಮೇಲೆ ರೂ.7,52,47,541/–ಗಳಿಗೆ ಗುತ್ತಿಗೆದಾರರಿಗೆ ವಹಿಸಲಾಗಿತ್ತು. ಕಾಮಗಾರಿ ಪ್ರಗತಿಯಲ್ಲಿದ್ದ ಸಂದರ್ಭದಲ್ಲಿ ಇಲಾಖೆಯ ಅಧಿಕಾರಿಗಳು ಹಾಗೂ ಸಣ್ಣ ನೀರಾವರಿ ಇಲಾಖೆಯ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯ ಸದಸ್ಯರು ಕಾಮಗಾರಿಯ ಸ್ಥಳ ಪರಿವೀಕ್ಷಣೆ ನಡೆಸಿ, ಕಾಮಗಾರಿಯ ಸದೃಢತೆಯನ್ನು ಹೆಚ್ಚಿಸಲು ನೀಡಿದ ಸಲಹೆಗಳಂತೆ ಗುತ್ತಿಗೆದಾರರು ಭಾಗಶ: ನಿರ್ವಹಿಸಿದ ಹಾಗೂ ನಿರ್ವಹಿಸಬೇಕಾಗಿದ್ದ ಹೆಚ್ಚುವರಿ ಕೆಲಸಗಳು ಮತ್ತು ಹೆಚ್ಚುವರಿ ಅಂಶಗಳು ಅಂದರೆ ವರ್ಕ್‌ಸ್ಲಿಪ್ ಮತ್ತು ಇ.ಐ.ಆರ್.ಎಲ್ ಸಂಬಂಧಿಸಿದಂತೆ 465.60 ಲಕ್ಷ ರೂಗಳ ಹೆಚ್ಚಿನ ಆರ್ಥಿಕ ಹೊರೆಗೆ ಮೇಲೆ (2)ರಲ್ಲಿ ದಿನಾಂಕ 19/06/07ರಲ್ಲಿ ಅನುಮೋದನೆ ನೀಡಲಾಗಿದೆ.

3) ಪ್ರಸ್ತುತ ಕಾಮಗಾರಿಯು ಭೌತಿಕವಾಗಿ ಪೂರ್ಣಗೊಂಡಿದೆ. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರು ಮೂಲ ಅಂದಾಜಿನಂತೆ ನಿರ್ವಹಿಸಿದ ಕೆಲಸಗಳಿಗೆ ಹಾಗೂ ಹೆಚ್ಚಿನ ಆರ್ಥಿಕ ಹೊರೆ ಸೇರಿದಂತೆ ಪೂರ್ಣಗೊಂಡ ಯೋಜನೆಯ ಪರಿಷ್ಕೃತ ಅಂದಾಜು ಪಟ್ಟಿಯನ್ನು ರೂ.1270.78 ಲಕ್ಷಗಳಿಗೆ ತಯಾರಿಸಿರುತ್ತಾರೆ. ವಾಸ್ತವಿಕ ಅವಶ್ಯಕತೆಗೆ ತಕ್ಕಂತೆ ಅಂತಿಮವಾಗಿ ಪರಿಷ್ಕೃತ ಅಂದಾಜನ್ನು ತಯಾರಿಸಲಾಗಿದ್ದು, ಪರಿಷ್ಕೃತ ಅಂದಾಜು ಮೊತ್ತ ಅನುಮೋದನೆಗೊಂಡಿರುವ ಮೊತ್ತಕ್ಕಿಂತ 52.70 ಲಕ್ಷ ರೂ.ಗಳು ಹೆಚ್ಚಾಗಿದೆ. (ಅನುಮೋದಿತ ಟೆಂಡರ್ ಮೊತ್ತ ರೂ. 752.48 ಲಕ್ಷ ಮತ್ತು ಅನುಮೋದನೆಗೊಂಡಿರುವ ಹೆಚ್ಚುವರಿ ಆರ್ಥಿಕ ಹೊರೆ ರೂ.465.60 ಲಕ್ಷ, ಒಟ್ಟು ಅನುಮೋದನೆಯಾಗಿರುವ ಮೊತ್ತ ರೂ. 1218.08 ಲಕ್ಷ) ಈ ಪರಿಷ್ಕೃತ ಅಂದಾಜು ಪಟ್ಟಿಗೆ ಸರ್ಕಾರದ ಅನುಮೋದನೆ ಕೋರಿ ಮೇಲೆ (3)ರಲ್ಲಿ ಓದಲಾದ ದಿನಾಂಕ:29/10/07ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಪ್ರಸ್ತಾವನೆ ಸಲ್ಲಿಸಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 93 ಅಪಿಬಂ 2006, ಬೆಂಗಳೂರು, ದಿನಾಂಕ: 6ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆ, ಚಿತ್ತಾಪುರ ತಾಲ್ಲೂಕು, ಕಾಗಿನಾ ನದಿಗೆ ಅಡ್ಡಲಾಗಿ ಶಂಕರವಾಡಿ ಹತ್ತಿರ ಸೇತುವೆಯನ್ನೊಳಗೊಂಡ ಬಂದಾರ ನಿರ್ಮಾಣ ಕಾಮಗಾರಿಯ 1270.78 ಲಕ್ಷ ರೂ.ಗಳ (ಒಂದು ಸಾವಿರದ ಇನ್ನೂರ ಎಪ್ಪತ್ತು ಲಕ್ಷದ ಎಪ್ಪತ್ತೆಂಟು ಸಾವಿರ ರೂ.ಗಳು ಮಾತ್ರ) ಪರಿಷ್ಕೃತ ಅಂದಾಜು ಪಟ್ಟಿಗೆ ಸರ್ಕಾರವು ಅನುಮೋದನೆ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಲೋಇ 346 ಆಕೋ–1/09, ದಿನಾಂಕ:16/05/09ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಪಿ.ಆರ್. 2536

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಮಾಜಿ ದೇವದಾಸಿ ಮಹಿಳೆಯರಿಗೆ ಮಾಸಾಶನ ನೀಡುವ ಕುರಿತು ಎರಡನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ – ಆದೇಶ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಮಮಇ 57 ಮಅನಿ 2008, ದಿನಾಂಕ: 15–03–2008.

2) ಸರ್ಕಾರದ ಆದೇಶ ಸಂಖ್ಯೆ: ಮಮಇ 78 ಮಅನಿ 2008, ದಿನಾಂಕ: 19–01–2009.

3) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ, ಬೆಂಗಳೂರು ಇವರ ಪತ್ರ ಸಂಖ್ಯೆ: ಮಅನಿ:ದೇಪುಯೋ:ಮಾಸಾಶನ: 45: 2008–09, ದಿನಾಂಕ: 23–09–2009 ಮತ್ತು 16–10–2009.

